# ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್. ಸಂಪ್ರಬಂಧ)


ಅಧ್ಯಯನಕಾರರು

**ತುಕಾರಾಮ**

ಮಾರ್ಗದರ್ಶಕರು

**ಡಾ. ರಹಮತ್ ತರೀಕೆರೆ**

ಪ್ರಾಧ್ಯಾಪಕ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೭

# ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್. ಸಂಪ್ರಬಂಧ)

ಅಧ್ಯಯನಕಾರರು

**ತುಕಾರಾಮ**

ಮಾರ್ಗದರ್ಶಕರು

**ಡಾ. ರಹಮತ್ ತರೀಕೆರೆ**

ಪ್ರಾಧ್ಯಾಪಕ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ-೫೮೩ ೨೭೬

೨೦೦೭

# ಪ್ರಮಾಣ ಪತ್ರ

ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳ ಅಧ್ಯಯನ ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ರಹಮತ್ ತರೀಕೆರೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ, ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ :೨೦.೦೭.೨೦೦೭

ತುಕಾರಾಮ
ಅಧ್ಯಯನಕಾರರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ದೃಢೀಕರಣ ಪತ್ರ

ತುಕಾರಾಮ ಇವರು **ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳ ಅಧ್ಯಯನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ, ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಳಿಗೆ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ** : ವಿದ್ಯಾರಣ್ಯ
**ದಿನಾಂಕ** :೨೦.೦೭.೨೦೦೭

20/7/07

**ಡಾ. ರಹಮತ್ ತರೀಕೆರೆ**
ಮಾರ್ಗದರ್ಶಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ ಮಹತ್ವ ವ್ಯಾಪ್ತಿ ಹಾಗೂ ಅಧ್ಯಯನ ವಿಧಾನ

## ೧.೧. ಅಧ್ಯಯನದ ಉದ್ದೇಶ ಮತ್ತು ಮಹತ್ವ

ಕನ್ನಡ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಪ್ರವಾಸ ಸಾಹಿತ್ಯವೂ ಒಂದು. ಕನ್ನಡದಲ್ಲಿ ೧೯ನೇ ಶತಮಾನದಲ್ಲಿ ಪ್ರವಾಸ ಸಾಹಿತ್ಯ ಉಗಮವಾಯಿತು. 'ಕರ್ಕಿ ವೆಂಕಟರಮಣಶಾಸ್ತ್ರಿ'ಯವರು ೧೮೮೦ರಲ್ಲಿ ಪ್ರಕಟಿಸಿದ 'ದಕ್ಷಿಣ ಭಾರತದ ಯಾತ್ರೆ' ಎಂಬ ಕೃತಿಯು ಕನ್ನಡದ ಮೊದಲ ಪ್ರವಾಸ ಕಥನವಾಗಿದೆ. ವಸಾಹತುಶಾಹಿ ಕಾಲದಲ್ಲಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಈ ಪ್ರಕಾರವು ಕನ್ನಡದಲ್ಲಿಯೂ ಆರಂಭಗೊಂಡಿತು.

ಪ್ರಪಂಚದ ಬೇರೆ ಬೇರೆ ದೇಶ ಹಾಗೂ ಪ್ರಾಂತ್ಯಗಳನ್ನು ಕುರಿತು ಕನ್ನಡದಲ್ಲಿ ಪ್ರವಾಸ ಕಥನಗಳು ರಚನೆಯಾಗಿವೆ. ಆದರೆ ಅಮೆರಿಕ ಕುರಿತ ಪ್ರವಾಸ ಕಥನಗಳ ಸಂಖ್ಯೆ ಉಳಿದೆಲ್ಲ ದೇಶಗಳ ಮೇಲೆ ಬಂದ ಪ್ರವಾಸ ಕಥನಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿವೆ. ಸುಮಾರು ೮೦ಕ್ಕೂ ಹೆಚ್ಚು ಅಮೆರಿಕ ಕುರಿತ ಪ್ರವಾಸ ಕಥನಗಳು ಕನ್ನಡದಲ್ಲಿ ರಚನೆಯಾಗಿವೆ. ಹೀಗೆ ಒಂದೇ ದೇಶದ ಕುರಿತ ಪ್ರವಾಸ ಕಥನಗಳು ಹೆಚ್ಚಿನ ಸಂಖ್ಯೆಯಲ್ಲಿ ರಚನೆಯಾಗಲು ಕಾರಣವೇನು? ಅವುಗಳ ರಚನೆಯ ಹಿಂದಿನ ತಾತ್ವಿಕತೆ ಏನು? ಎಂಬುದು ಕುತೂಹಲಕರ ಸಂಗತಿಯಾಗಿದೆ.

ಜಾಗತೀಕರಣದ ಸಂದರ್ಭದಲ್ಲಿ ಅಮೆರಿಕವೂ ಎಲ್ಲ ಕ್ಷೇತ್ರಗಳಲ್ಲಿ ತನ್ನ ಬಿಗಿಹಿಡಿತವನ್ನು ಸಾಧಿಸಿಕೊಂಡಿರುವುದು ತಿಳಿದಿರುವ ವಿಷಯ. ರಷ್ಯಾದ ಪತನದ ನಂತರ ಅಮೆರಿಕ ಒಂದು ಬಲಿಷ್ಠ ರಾಷ್ಟ್ರವಾಗಿ ಹೊರಹೊಮ್ಮಿತು. ಶಿಕ್ಷಣ, ಉದ್ಯೋಗ ಮತ್ತು ವ್ಯಾಪಾರ ಇವುಗಳ ಸಹಾಯದಿಂದ ಬೃಹತ್ ಕೈಗಾರಿಕೆ ಬಂಡವಾಳ ಮತ್ತು ಉದ್ದಿಮೆಗಳನ್ನು ಸ್ಥಾಪಿಸಿಕೊಂಡಿತು. ಶಿಕ್ಷಣ, ಉದ್ಯೋಗ, ವ್ಯಾಪಾರ ಇವುಗಳು ಮಧ್ಯಮವರ್ಗದ ಜನರನ್ನು ಆಕರ್ಷಿಸತೊಡಗಿದವು. ಅದರಿಂದಾಗಿ ಮಧ್ಯಮವರ್ಗದ ಜನರು ಹೆಚ್ಚಾಗಿ ಅಮೆರಿಕೆಗೆ ಹೋಗತೊಡಗಿದರು.

ಅಮೆರಿಕ ಕುರಿತ ಪ್ರವಾಸ ಕಥನಗಳು ಮೇಲ್‌ಸ್ತರದಲ್ಲಿ ಪ್ರವಾಸಗಳಾಗಿ ಕಂಡು ಬಂದರೆ ಕೆಳಸ್ತರದಲ್ಲಿ ಆರ್ಥಿಕ ರಾಜಕಾರಣ ಕಾರ್ಯ ನಿರ್ವಹಿಸುತ್ತದೆ. ಶಿಕ್ಷಣ, ಉದ್ಯೋಗ ಮತ್ತು ವ್ಯಾಪಾರ ಮೂರು ಸಂಗತಿಗಳು ಮಧ್ಯಮವರ್ಗದ ಜನರನ್ನು ಅಮೆರಿಕೆಗೆ ಹೋಗುವ ಹಾಗೆ ಮಾಡಿವೆ. 'ನೆಮ್ಮುಗೆಯ ನಾಡು', 'ವಿಸ್ಮಯಗಳ ನಾಡಿನಲ್ಲಿ', 'ಅವನಿಯ ಅಪ್ಸರೆ', 'ಅವಕಾಶಗಳ ಅಮರಾವತಿ', 'ಪಶ್ಚಿಮದ ಹೊಂಬೆಳಕು', 'ಅಮರ ಲೋಕದಲ್ಲಿ', 'ಸ್ವಪ್ನಲೋಕ' ಮುಂತಾದ ಪ್ರವಾಸಕಥನದ ಹೆಸರುಗಳು ಇದನ್ನು ಸಮರ್ಥಿಸುವಂತಿವೆ.

ಈ ಕಾರಣಕ್ಕಾಗಿ ಒಂದೇ ದೇಶದ ಕುರಿತ (ಅಮೆರಿಕ ಕುರಿತ) ಪ್ರವಾಸ ಕಥನಗಳು ಹೆಚ್ಚಿನ ಸಂಖ್ಯೆಯಲ್ಲಿ ರಚಿತವಾಗಿವೆ.

ಪ್ರವಾಸ ಕಥನಗಳು ಸಾಮಾನ್ಯವಾಗಿ ಒಂದು ದೇಶದ ಪ್ರಾಕೃತಿಕ, ಐತಿಹಾಸಿಕ ಸ್ಥಳಗಳ ವಿವರಣೆಯನ್ನು ನೀಡುವುದು ಕಂಡು ಬರುತ್ತದೆ. ಮತ್ತೊಂದು ಕಡೆ ಒಂದು ದೇಶದ ಅಧೀನ ಮತ್ತು ಆಳುವ ಸಂಬಂಧವಾಗಿ ಪ್ರವಾಸ ಕಥನಗಳು ಹುಟ್ಟಿರುವುದೂ ಕಂಡು ಬರುತ್ತವೆ. ಅಮೆರಿಕದಂತಹ ಬಲಿಷ್ಠ ದೇಶವನ್ನು ಅದರ ಜೀವನ ವಿಧಾನವನ್ನು ಒಂದು ಮಾದರಿಯನ್ನಾಗಿ ಇಟ್ಟುಕೊಂಡು ಅನುಕರಣಶೀಲ ಮಧ್ಯಮವರ್ಗದ ಜನ ಪ್ರವಾಸಕ್ಕೆ ಹೋಗಿರುವುದು ಕಂಡು ಬರುತ್ತದೆ.

ಆದರೆ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡಿರುವ ಪ್ರವಾಸ ಕಥನಗಳಲ್ಲಿ ಲೇಖಕರು ಅಮೆರಿಕಕ್ಕೆ ಅಧೀನತೆಯನ್ನು ತೋರಿಸುತ್ತಾರೊ? ಅಥವಾ ಇಲ್ಲವೋ? ಇದು ಇಲ್ಲಿನ ಮುಖ್ಯಪ್ರಶ್ನೆ. ಸಾಹಿತ್ಯದ ಮೂಲಭೂತ ಗುಣ ಬಂಡಾಯವಾಗಿದ್ದು, ಸಾಮಾನ್ಯವಾಗಿ ಪ್ರಭುತ್ವದ ವಿರೋಧಿಯಾಗಿ ಆಲೋಚಿಸು ತ್ತಿರುತ್ತದೆ. ಪ್ರವಾಸ ಕಥನಗಳಲ್ಲಿ ಲೇಖಕರು ಅಮೆರಿಕೆಯ ಬಗೆಗೆ ಅಧೀನ ಮನೋಭಾವ ತೋರಿದ್ದಾರೊ, ವಿಮರ್ಶಾತ್ಮಕ ದೃಷ್ಟಿಕೋನದಲ್ಲಿ ಬರೆದಿರುವರೊ. ಬಂಡಾಯ ಮತ್ತು ಎರಡೂ ನೆಲೆಯಲ್ಲಿ ಪ್ರವಾಸ ಕಥನಗಳಲ್ಲಿ ತಮ್ಮ ನೋಟ, ಚಿಂತನೆ ಅಭಿವ್ಯಕ್ತಪಡಿಸಿರುವರೋ ಎಂಬುದನ್ನು ಚರ್ಚಿಸಲು ಅಮೆರಿಕ ಕುರಿತ ಪ್ರವಾಸ ಕಥನಗಳು ಮುಖ್ಯ ಆಕರಗಳಾಗುತ್ತವೆ.

### ೧.೨. ವ್ಯಾಪ್ತಿ

ಯಾವುದೇ ಒಂದು ವಿಷಯದ ಅಧ್ಯಯನವು ನಿರ್ದಿಷ್ಟವಾದ ಚೌಕಟ್ಟನ್ನು ಹೊಂದಿರಬೇಕಾಗುತ್ತದೆ. ನಿರ್ದಿಷ್ಟವಾದ ವ್ಯಾಪ್ತಿಯು ವಿಷಯದ ಅಧ್ಯಯನಕ್ಕೆ ಅನುಕೂಲತೆಯನ್ನು ಮಾಡಿಕೊಡುತ್ತದೆ. ಅದರಂತೆ 'ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳ ಅಧ್ಯಯನ' ಎಂಬ ವಿಷಯಕ್ಕೆ ನಿರ್ದಿಷ್ಟವಾದ ಚೌಕಟ್ಟನ್ನು ಹಾಕಿಕೊಳ್ಳಲಾಗಿದೆ. ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಅಮೆರಿಕ ಕುರಿತ ಪ್ರವಾಸ ಕಥನಗಳು ಹೆಚ್ಚಿನ ಸಂಖ್ಯೆಯಲ್ಲಿ ರಚಿತವಾಗಿವೆ. ಅವುಗಳ ವಿವರ ಇಂತಿದೆ.

**ಪಟ್ಟಿ**

| | | | |
|---|---|---|---|
| ೧. | ಅನುಪಮ ನಿರಂಜನ | - | ಅಂಗೈಯಲ್ಲಿ ಯುರೋ ಅಮೆರಿಕ. |
| ೨. | ಅಜ್ಜಂಪುರ ಕೃಷ್ಣಸ್ವಾಮಿ | - | ಆಗಮಿಕರ ನಾಡು. |
| ೩. | ಆರ್ಯಾಂಬ ಪಟ್ಟಾಭಿ | - | ವಿದೇಶ ಪ್ರವಾಸ. |
| ೪. | ಕುಲಕರ್ಣಿ ಜೀವಿ | - | ಜೀವಿ ಕಂಡ ಅಮೆರಿಕ. |
| ೫. | ಕುಲಶೇಖರಿ | - | ಬೊಗಸೆ ಬುತ್ತಿ. |

೬. ಕೃಷ್ಣಮೂರ್ತಿ ಬಕ್ಕಕುಂದಿ - ನನ್ನ ವಿದೇಶ ಪ್ರವಾಸ.

೭. ಕೃಷ್ಣಮೂರ್ತಿರಾವ್ ಕೆ.ಎನ್., - ಅಮೆರಿಕ ಪ್ರವಾಸದ ಅನುಭವಗಳು.

೮. ಕೃಷ್ಣಾನಂದ ಕಾಮತ್ - ನಾನು ಅಮೆರಿಕೆಗೆ ಹೋಗಿದ್ದೆ.

೯. ಗಣೇಶ ಮಲ್ಯ ಕೆ., - ಅಮೆರಿಕದಲ್ಲಿ ಅರವತ್ತು ದಿನಗಳು.

೧೦. ಗುರುಮೂರ್ತಿ ಕೆ.ಜಿ., - ಅಮೆರಿಕೆಯಲ್ಲಿ ಪ್ರವಾಸ.

೧೧. ಗೊರೂರು ರಾಮಸ್ವಾಮಿ ಅಯ್ಯಂಗಾರ್ - ಅಮೆರಿಕಾದಲ್ಲಿ ಗೊರೂರು.

೧೨. ಗೋಪಾಲ ಜಿ., - ಮೈಸೂರಿನಿಂದ ಮೆಕ್ಸಿಕೋಗೆ.

೧೩. ಗೌತಮ ಎಸ್.ಆರ್., - ನಯಾಗರಕ್ಕೆ ಐನೂರು ಮೈಲಿ.

೧೪. ಚಂದ್ರಭಾಗಾದೇವಿ - ಗೆಜ್ಜೆಯ ಹೆಜ್ಜೆ ನುಡಿ.

೧೫. ಚಂದ್ರವದನರಾವ್ ಎಚ್.ಆರ್., - ವಿದೇಶ ಪ್ರವಾಸ.

೧೬. ಚಂದ್ರಶೇಖರ ಆಲೂರು - ಅಮೆರಿಕಾದಲ್ಲಿ ಆಲೂರು.

೧೭. ಜಗದಂಬಾ ಮಲ್ಲೇದೇವರು - ಪಯಣಿಗಳಾಗಿ ಪಶ್ಚಿಮದೆಡೆಗೆ.

೧೮. ಜಲಜಾ ಗಂಗೂರ - ಅವನಿಯ ಅಪ್ಸರೆ ಅಮೆರಿಕಾ.

೧೯. ಜಯಕಾಲಬಾಗಲ್ - ಅಮೆರಿಕದಲ್ಲಿ ಅವರತ್ತೇಳರ ಹುಟ್ಟುಹಬ್ಬ.

೨೦. ಜೋಷಿ ಬಿ.ಆರ್., - ಕೈಗೂಡಿದ ಕನಸು.

೨೧. ಧಾರವಾಡಕರ ರಾ.ಯ., - ನಾನು ಕಂಡ ಅಮೆರಿಕ.

೨೨. ಧಾರಿಣಿ - ಭಾವ-ಸೇತು ಜ್ವಾಲಾ.

೨೩. ದೇಜಗೌ., - ವಿಸ್ಮಯಗಳ ನಾಡಿನಲ್ಲಿ.

೨೪. ನಾಗ ಐತಾಳ - ಅಮೆರಿಕನ್ನಡಿಯೊಬ್ಬನ ದಿನಚರಿಯಿಂದ.

೨೫. ನಾಗತಿಹಳ್ಳಿ ಚಂದ್ರಶೇಖರ - ಅಮೆರಿಕಾ! ಅಮೆರಿಕಾ!.

೨೬. ನಾಗಪ್ಪ ಟಿ.ಆರ್., - ದೇಶ ನೋಡು ಕೋಶ ಓದು.

೨೭. ನಾಗರಾಜರಾವ್ ಮ., - ನಾರಿ ನಿನಗೆ ನಮೋ ನಮೋ.

೨೮. ನಾಡಿಗ ಕೃಷ್ಣಮೂರ್ತಿ - ಸಾಗರದಾಚೆ.

೨೯. ನೀಳಾದೇವಿ - ನಾ ಕಂಡ ಆ ಖಂಡ.

೩೦. ನಂಜೇಗೌಡ ಎಚ್.ಬಿ.,
ಸೀತಮ್ಮ ನಂಜೆಗೌಡ - ನಾವು ಕಂಡ ಅಮೆರಿಕಾ.

೩೧. ನಂಜುಂಡೇಗೌಡ ಜಿ.ಆರ್., - ಕೆರೇಬಿಯನ್ ದ್ವೀಪಗಳಲ್ಲಿ.

೩೨. ನಂಜುಂಡಶಾಸ್ತ್ರಿ ಎನ್., - ಅಮೆರಿಕ ಭಾರತೀಯನ ದೃಷ್ಟಿಯಲ್ಲಿ.

೩೩. ಪರಮೇಶ್ವರಿ ಲೋಕೇಶ್ವರ್ - ಅಮೆರಿಕಾದಲ್ಲಿ ಅರವತ್ತು ದಿನಗಳು.

೩೪. ಪದ್ಮಾ ಉಮಾಪತಿ - ನಾವು ಕಂಡ ಅಮೆರಿಕಾ.

೩೫. ಪದ್ಮಾ ಶೆಣೈ - ಅಮೆರಿಕಾ ವಾಸ ಪ್ರವಾಸ.

೩೬. ಪುಟ್ಟಮಾದಪ್ಪ ವಿ., - ನೆಮ್ಮಗೆಯ ನಾಡು.

೩೭. ಪುಟ್ಟಮಾದಪ್ಪ ವಿ., - ಮಂಜಿನ ಮಡಿಲಲ್ಲಿ.

೩೮. ಪೆಂಡಕೂರು ಗುರುಮೂರ್ತಿ - ಬಹುರೂಪಿ ವಸುಂಧರಾ.

೩೯. ಪೆಂಡಕೂರು ಗುರುಮೂರ್ತಿ - ಅವಕಾಶಗಳ ಅಮರಾವತಿ ಅಮೆರಿಕಾ.

೪೦. ಬಗರಿ ಎನ್.ಡಿ., - ವಿದೇಶ ಪ್ರವಾಸದ ಅನುಭವಗಳು.

೪೧. ಭದ್ರಯ್ಯ ಎನ್., - ಪ್ರಪಂಚ ಪರ್ಯಟನ,

೪೨. ಮಣಕ್ಕಾರ ಗೋಪಾಲಕೃಷ್ಣ ಶ್ಯಾನಭಾಗ - ಅಮೆರಿಕಾ ಅನುಭವಗಳು.

೪೩. ಮಾಳವಾಡ ಸ.ಸ., - ಸಂಚಾರ ಸಂಗಮ.

೪೪. ಮೂರ್ತಿರಾವ್ ಎನ್.ಎನ್., - ಅಪರವಯಸ್ಕನ ಅಮೆರಿಕಯಾತ್ರೆ.

೪೫. ರಂಗನಾಥ ಹೆಚ್.ಕೆ., - ಪರದೇಶಿಯಾದಾಗ.

೪೬. ರಂಜನಾಭಟ್ಟ - ಕುಬೇರ ರಾಜ್ಯದ ಚಿತ್ರ ವಿಚಿತ್ರ.

೪೭. ರಜತಾದ್ರಿ - ಪಶ್ಚಿಮದ ಹೊಂಬೆಳಕು.

೪೮. ರಾಮನ್ ಬಿ.ವಿ., - ಅಮೆರಿಕಾದಲ್ಲಿ ಓರ್ವಹಿಂದೂ.

೪೯. ರಾಮಣ್ಣ ಕೆ., - ಜಗವಸುತ್ತಿನಲಿ-ಜನರ ನೋಡಿ ಕಲಿ.

೫೦. ರಾಮಚಂದ್ರನ್ ಕೆ.ಆರ್., - ಅಮೆರಿಕಾದಲ್ಲೊಬ್ಬ ಗಾಂಪ.

೫೧. ರಾಮರಾವ್ ಟಿ.ಕೆ., - ಗೋಳದ ಮೇಲೊಂದು ಸುತ್ತು.

೫೨. ರಾಜಲಕ್ಷ್ಮೀ ಗೋಪಾಲ - ಅಮರಲೋಕದಲ್ಲಿ ಅಧ್ಯಾಪಕಿ.

೫೩. ಲಲಿತಾಶಾಸ್ತ್ರಿ - ಉತ್ತರ ಅಮೆರಿಕಾದಲ್ಲಿ ಚಾತುರ್ಮಾಸ.

೫೪. ಲಲಿತಾ ಸುಬ್ಬರಾವ್ - ನಾನು ಮತ್ತು ಅಮೆರಿಕಾ.

೫೫. ವರದರಾಜನ್ - ಕಣ್ಣಂಚಿನಲ್ಲಿ ಪೂರ್ವ ಪಶ್ಚಿಮ.

೫೬. ವಸಂತರಾಜ ಎನ್.ಕೆ., - ಅಮೆರಿಕಾದೊಳಗೊಂದು ಇಣುಕು.

೫೭. ವಿರೂಪಾಕ್ಷಪ್ಪ ಬಿ., - ನಾ ಕಂಡ ಅಮೆರಿಕ.

೫೮. ವಿಶ್ವಾಸ - ಪಿಡಿದು ಸಂಸ್ಕೃತ ಸೂತ್ರವ.

೫೯. ವೆಂಕಟರಾಮ ಎನ್., - ಪ್ರದಕ್ಷಿಣೆ.

೬೦. ವೆಂಕಟಸ್ವಾಮಿ ನಂದಿ ಎಸ್., - ಪಾಶ್ಚಾತ್ಯ ಪ್ರವಾಸ ನೆನಪುಗಳು.

೬೧. ವೆಂಕಟಸ್ವಾಮಿ - ಅಮೆರಿಕಾದಲ್ಲಿ ನನ್ನ ಅನುಭವಗಳು.

೬೨. ವೆಂಕಟೇಶಮೂರ್ತಿ ಎಚ್.ಎಸ್., - ಅಮೆರಿಕದಲ್ಲಿ ಬಿಲ್ಲು ಹಬ್ಬ.

೬೩. ವ್ಯಾಸರಾಯ ಬಲ್ಲಾಳ - ನಾನೊಬ್ಬ ಭಾರತೀಯ ಪ್ರವಾಸಿ.

೬೪. ಶಶಿಧರ ವಿಶ್ವಾಮಿತ್ರ - ಪರಕೀಯ.

೬೫. ಶಿವರಾಮ ಕಾರಂತ ಕೆ., - ಪಾತಾಳಕ್ಕೆ ಪಯಣ.

೬೬. ಶಿವರುದ್ರಪ್ಪ ಜಿ.ಎಸ್., - ಅಮೆರಿಕದಲ್ಲಿ ಕನ್ನಡಿಗ.

೬೭. ಶೀರ್ನಾಳಿ ಚಂದ್ರಶೇಖರ - ನನ್ನ ಕನಸು ನನಸಾದಾಗ.

೬೮. ಶ್ರೀಧರ ಬಿ., - ಸ್ವಪ್ನಲೋಕ.

೬೯. ಶ್ರೀನಿವಾಸಯ್ಯ ಹೊ., - ಜಯಶ್ರೀ ಕಂಡ ಅಮೆರಿಕಾ.

೭೦. ಶ್ರೀಮಿತ್ತೂರು - ಅಮೆರಿಕಾ ನಾನು ಕಂಡಂತೆ ಜನಜೀವನ.

೭೧. ಸಣ್ಣಯ್ಯ ಬಿ.ಎಸ್., - ನಾನೂ ಹೋಗಿದ್ದೆ ಅಮೆರಿಕೆಗೆ, ಸಂವಹನ.

೭೨. ಸರಸ್ವತಿ ನಾಗರಾಜ ಎನ್.ಎಸ್., - ನಾವು ನೋಡಿದ ಪಶ್ಚಿಮ ದೇಶಗಳ ಒಂದು ಇಣುಕು ನೋಟ.

೭೩. ಸ್ವಾಮಿ ಬಿ.ಎಸ್., - ಅಮೆರಿಕದಲ್ಲಿ ನಾನು.

೭೪. ಸೀತಾರಾಮಯ್ಯ ಕೆ.ಎಂ., - ಅಪೂರ್ವ.

೭೫. ಸೀಯಾರ್ಕ್ - ಇದು ಅಮೇರಿಕ.

೭೬. ಸುಧಾಮೂರ್ತಿ - ಅಂಟ್ಲಾಟಿಕ್‌ದಾಚೆಗೆ.

೭೭. ಸುಬ್ಬರಾಯಾಚಾರ್ ಉ.ಕಾ., - ಅಮೆರಿಕಾದ ಅನುಭವ.

೭೮. ಸುಶೀಲಾ ಕೊಪ್ಪರ್ - ಪಡುವಣದ ಪತ್ರಮಾಲೆ.

೭೯. ಸಾರಾ ಅಬೂಬಕ್ಕರ್ - ಐಷಾರಾಮದ ಆಳದಲ್ಲಿ.

೮೦. ಸ್ವಾಮಿ ಬಿ.ಎಸ್., - ಅಮರ ನೆನಪು ಅಮೆರಿಕ.

೮೧. ಹೆಗಡೆ ಪಿ.ಎ., - ಆಲ್ಮನೆಯಿಂದ ಆ್ಯನ್ ರಬ್ಬರ್‌ಗೆ.

ಇಷ್ಟು ಸಂಖ್ಯೆಯ ಪ್ರವಾಸ ಕಥನಗಳಲ್ಲಿ ಅಧ್ಯಯನದ ಅನುಕೂಲತೆಗಾಗಿ ಮುಖ್ಯವಾದ ಮೂರು ಪ್ರವಾಸ ಕಥನಗಳನ್ನು ಆಯ್ದುಕೊಳ್ಳಲಾಗಿದೆ. ಅವೆಂದರೆ;

೧. ಎ.ಎನ್. ಮೂರ್ತಿರಾವ್ ಅವರ 'ಅಪರವಯಸ್ಕನ ಅಮೆರಿಕಯಾತ್ರೆ'.

೨. ಬಿ.ಜಿ.ಎಲ್. ಸ್ವಾಮಿಯವರ 'ಅಮೆರಿಕದಲ್ಲಿ ನಾನು'.

೩. ಸಾರಾ ಅಬೂಬಕ್ಕರ್ ಅವರ 'ಐಷಾರಾಮದ ಆಳದಲ್ಲಿ'.

ಈ ಪ್ರವಾಸ ಕಥನಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲು ಕಾರಣಗಳು ಇಲ್ಲದೇ ಇಲ್ಲ. ಕೆಲವು ಪ್ರಮುಖ ಕಾರಣಗಳು ಇಂತಿವೆ.

೧. ಪ್ರವಾಸ ಕಥನಗಳನ್ನು ಬೇರೆ ಬೇರೆ ಪಂಥಕ್ಕೆ ಸೇರಿದ ಲೇಖಕರು ಬರೆದಿರುವುದು.

೨. ಬೇರೆ ಬೇರೆ ತಲೆಮಾರಿನ ಲೇಖಕರು ಬರೆದಿರುವುದು ಮತ್ತು ಮುಖ್ಯವಾಗಿ ಮಹಿಳಾ ಪ್ರತಿನಿಧಿಯಾಗಿ ಸಾರಾ ಅಬೂಬಕ್ಕರ್ ಅವರು ಇರುವುದು.

೩. ಲೇಖಕರ ದೃಷ್ಟಿಕೋನಗಳು ಬೇರೆ ಬೇರೆ ಆಗಿರುವುದು.

ಮುಖ್ಯವಾಗಿ ನವೋದಯ ಪಂಥದಿಂದ ಮೂರ್ತಿರಾವ್ ಅವರ 'ಅಪರವಯಸ್ಕನ ಅಮೆರಿಕಯಾತ್ರೆ' ಪ್ರವಾಸ ಕಥನವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಮೂರ್ತಿರಾವ್ ಅವರು ಅಮೆರಿಕವನ್ನು ತಮ್ಮ ಇಳಿವಯಸ್ಸಿನಲ್ಲಿ ನೋಡುವ ಬಗೆ ಎಂತಹುದು ಎಂಬ ಕಾರಣಕ್ಕಾಗಿ ಅದನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಮೂರ್ತಿರಾವ್ ಅವರ ಉದಾರವಾದಿ ಮನೋಭಾವ ಹಾಗೂ ಭಾರತೀಯ ಸಂಸ್ಕೃತಿಯ ಬಗೆಗಿನ ಶ್ರದ್ಧೆಗಳು ಪ್ರವಾಸ ಕಥನದಲ್ಲಿ ಹೇಗೆ ವ್ಯಕ್ತವಾಗಿವೆ ಎಂಬ ಕಾರಣಕ್ಕಾಗಿ ಈ ಪ್ರವಾಸ ಕಥನವನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಬಿ.ಜಿ.ಎಲ್. ಸ್ವಾಮಿಯವರ 'ಅಮೆರಿಕದಲ್ಲಿ ನಾನು' ಎಂಬ ಪ್ರವಾಸ ಕಥನವನ್ನು ನವ್ಯಕ್ಕೆ ಪ್ರತಿನಿಧಿಯಾಗಿ ಆಯ್ದುಕೊಳ್ಳಲಾಗಿದೆ. ನವ್ಯದ ಅಭಿವ್ಯಕ್ತಿ ಕ್ರಮ ಪ್ರವಾಸ ಕಥನದಲ್ಲಿ ಹೇಗೆ ಬಳಕೆಯಾಗಿದೆ? ಹಾಸ್ಯ, ಟೀಕೆ, ವಿಡಂಬನೆಗಳ ಮೂಲಕ ವ್ಯಕ್ತಿ ಸ್ವಾತಂತ್ರ್ಯದಂತಹ ಮೌಲ್ಯಗಳು ಪ್ರವಾಸ ಕಥನದಲ್ಲಿ ಹೇಗೆ ವ್ಯಕ್ತವಾಗಿವೆ? ಎಂಬುದನ್ನು ಚರ್ಚಿಸಲು ಈ ಕೃತಿಯನ್ನು ಬಳಸಿಕೊಳ್ಳಲಾಗಿದೆ.

ಬಂಡಾಯದಿಂದ ಸಾರಾ ಅಬೂಬಕ್ಕರ್ ಅವರ 'ಐಷರಾಮದ ಆಳದಲ್ಲಿ' ಎಂಬ ಪ್ರವಾಸ ಕಥನವನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಸ್ತ್ರೀಪರ ಚಿಂತಕಿಯಾಗಿ, ಬಂಡಾಯ ಲೇಖಕಿಯಾಗಿ ಪ್ರವಾಸ ಕಥನದಲ್ಲಿ ಹೇಗೆ ತಮ್ಮ ಸಾಮಾಜಿಕ ಪ್ರಜ್ಞೆಯನ್ನು ಅವರು ವ್ಯಕ್ತಪಡಿಸಿದ್ದಾರೆ ಎನ್ನುವುದನ್ನು ಗುರುತಿಸಲು ಈ ಕೃತಿ ಅಧ್ಯಯನದಲ್ಲಿ ಸಹಾಯಕವಾಗಿದೆ.

ಒಟ್ಟಾರೆಯಾಗಿ ಕನ್ನಡದ ಬೇರೆ ಬೇರೆ ಪಂಥದ, ತಲೆಮಾರಿನ ಮತ್ತು ಬೇರೆ ಬೇರೆ ದೃಷ್ಟಿಕೋನದ ಲೇಖಕರನ್ನು ಒಂದು ಕಡೆ ಮೇಳೈಸಿ ಪ್ರವಾಸ ಕಥನಗಳಲ್ಲಿ ಅವರ ಅಭಿವ್ಯಕ್ತಿ ಕ್ರಮ ಹೇಗಿದೆ ಎಂಬುದನ್ನು ನೋಡುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

## ೧.೩. ಅಧ್ಯಯನ ವಿಧಾನ

ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳ ಅಧ್ಯಯನಕ್ಕೆ ಕೆಲವು ವಿಧಾನಗಳನ್ನು ಅಳವಡಿಸಿ ಕೊಳ್ಳಲಾಗಿದೆ. ಆ ಅಧ್ಯಯನ ವಿಧಾನಗಳು ಈ ಕೆಳಗಿನಂತಿವೆ.

೧. ಪ್ರಸ್ತುತ ಪ್ರಬಂಧದ ಅಧ್ಯಯನಕ್ಕೆ ತೌಲನಿಕ ಅಧ್ಯಯನ ವಿಧಾನವನ್ನು ಬಳಸಲಾಗಿದೆ. ಅಧ್ಯಯನಕ್ಕೆ ಆರಿಸಿಕೊಂಡಿರುವ ಮೂರು ಪ್ರವಾಸ ಕಥನಗಳಲ್ಲಿ ಭಾರತದ ಬಗೆಗೆ, ಭಾರತೀಯ ಸಂಸ್ಕೃತಿ, ಜನಜೀವನದ ಬಗೆಗೆ ಆಯಾ ಲೇಖಕರ ದೃಷ್ಟಿಕೋನ ಹಾಗೂ ಅಭಿಪ್ರಾಯಗಳಲ್ಲಿ ಇರುವ ವ್ಯತ್ಯಾಸಗಳನ್ನು ಗುರುತಿಸಲಾಗುವುದು. ಅಮೆರಿಕ ದೇಶದ ಯಾವ ಸಂಗತಿಗಳನ್ನು ಲೇಖಕರು ಇಷ್ಟಪಡುತ್ತಾರೆ? ಏಕೆ ಇಷ್ಟಪಡುತ್ತಾರೆ? ಭಾರತದ ಯಾವ ನೆನಪುಗಳನ್ನು ಅವುಗಳೊಂದಿಗೆ ಜೋಡಿಸುತ್ತಾರೆ? ಹೇಗೆ ಮೌಲ್ಯಮಾಪನ ಮಾಡುತ್ತಾರೆ? ಎಂಬುದರ ವಿಶ್ಲೇಷಣೆಯನ್ನು ಈ ಅಧ್ಯಯನದಲ್ಲಿ ಮಾಡಲಾಗುವುದು.

೨. ಈ ಅಧ್ಯಯನದಲ್ಲಿ ಸದ್ಯಕ್ಕೆ ಕನ್ನಡದಲ್ಲಿ ಪ್ರಚಲಿತವಿರುವ ಸಾಂಸ್ಕೃತಿಕ ಅಧ್ಯಯನ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಅಮೆರಿಕ ದೇಶದ ಧರ್ಮ, ಜನಜೀವನ, ಭಾಷೆ, ಆಚರಣೆಗಳು ಇವುಗಳನ್ನು ಕುರಿತು ಮೂವರು ಲೇಖಕರು ಹೇಗೆ ಪ್ರತಿಕ್ರಿಯಿಸಿದ್ದಾರೆ? ಎಂಬುದನ್ನು ಗುರುತಿಸಲಾಗುವುದು. ಅದೇ ಹೊತ್ತಿಗೆ ತಮ್ಮ ದೇಶದ ಧರ್ಮ, ಜನಜೀವನ, ಭಾಷೆ, ಆಚರಣೆ, ಜೀವನ ವಿಧಾನ, ಇವುಗಳಿಗೆ ಹೇಗೆ ಪ್ರತಿಕ್ರಿಯಿಸುತ್ತಾರೆ? ಎಂಬುದನ್ನು ತೌಲನಿಕವಾಗಿ ಪರಿಶೀಲಿಸಲಾಗುವುದು. ಈ ಅಧ್ಯಯನದಲ್ಲಿ 'ಸಂಸ್ಕೃತಿ' ಎನ್ನುವುದನ್ನು ಒಂದು ದೇಶದ ಜನರ ಆಲೋಚನಾ ಕ್ರಮ ಎಂದು ಸರಳವಾಗಿ ವ್ಯಾಖ್ಯಾನಿಸಿಕೊಳ್ಳಲಾಗಿದೆ. ಜನರ ಆಲೋಚನೆ ಮತ್ತು ಕ್ರಿಯಾಶೀಲತೆಯನ್ನು ಸಾಂಸ್ಕೃತಿಕ ಎಂಬ ಅರ್ಥದಲ್ಲಿ ಬಳಸಿಕೊಳ್ಳಲಾಗಿದೆ.

೩. ಪ್ರಬಂಧದಲ್ಲಿ ಆಯ್ದುಕೊಂಡಿರುವ ಪ್ರವಾಸ ಕಥನಗಳಲ್ಲಿನ ಆಶಯ ಮತ್ತು ಧೋರಣೆಗಳ ಬಗೆಗೆ ಸಹಜವಾಗಿ ಇಲ್ಲಿ ಚರ್ಚಿಸಲಾಗಿದೆ. ಆದರೆ ಈ ಆಶಯ ಧೋರಣೆಗಳ ಜೊತೆಗೆ ಅಭಿವ್ಯಕ್ತಿಯಾಗಿರುವ ರೂಪವನ್ನೂ ಸಹ ಸೇರಿಸಿಕೊಂಡು ಚರ್ಚಿಸಲಾಗುವುದು. ಪ್ರವಾಸ ಕಥನಗಳಲ್ಲಿ ಶೈಲಿ, ಭಾಷೆ, ಕಥನಕ್ರಮ, ಮೂವರೂ ಲೇಖಕರಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದನ್ನು ಚರ್ಚಿಸಲಾಗುವುದು.

೪. ಅಂತಾರಾಷ್ಟ್ರೀಯ ರಾಜಕಾರಣದ ಹಿನ್ನೆಲೆಯಲ್ಲಿ ರಾಜಕಾರಣದ ಚರ್ಚೆಯನ್ನು ಪ್ರಬಂಧದಲ್ಲಿ ಮಾಡಲಾಗುವುದು. ಅಮೆರಿಕ ಮೂಲತಃ ಒಂದು ಸಾಮ್ರಾಜ್ಯಶಾಹಿ ಹಾಗೂ ಯುದ್ಧಖೋರ ದೇಶವಾಗಿದ್ದು, ಸರ್ವಾಧಿಕಾರ, ಬಡದೇಶಗಳನ್ನು ನಿರ್ದಾಕ್ಷಿಣ್ಯವಾಗಿ ದೋಚುವ, ಹಿಂಸಿಸುವ ಪರಂಪರೆ ಅದಕ್ಕೆ ಇದೆ. ಗ್ರಾಹಕ ಸಂಸ್ಕೃತಿಯನ್ನೆ ಹುಟ್ಟು ಹಾಕುವ, ಸ್ಪರ್ಧೆಯನ್ನು ಒಡ್ಡುವ, ಬಲಿಷ್ಠರು ಮಾತ್ರ ಬದುಕಲು ಅರ್ಹರು ಎಂಬ ಧೋರಣೆಯನ್ನು ರೂಪಿಸುವುದು ಇವೆಲ್ಲವನ್ನು ಅಮೆರಿಕ ಹೊಂದಿದೆ. ಈ ಎಲ್ಲ ಕಾರಣಗಳಿಗಾಗಿ ಅಮೆರಿಕದ ರಾಜಕಾರಣವನ್ನು ಲೇಖಕರು ಪ್ರವಾಸ ಕಥನಗಳಲ್ಲಿ ಹೇಗೆ ಚರ್ಚಿಸಿದ್ದಾರೆ ಎಂಬುದನ್ನು ಗಮನಿಸಲಾಗುವುದು.

೫. ಮಹಿಳಾ ದೃಷ್ಟಿಕೋನದಿಂದ ಪ್ರವಾಸ ಕಥನಗಳನ್ನು ನೋಡಲು ಸಾಧ್ಯವಿದೆ. ಅದರಲ್ಲೂ ಸಾರಾ ಅಬೂಬಕ್ಕರ್ ಮಹಿಳೆಯಾಗಿ ಪ್ರವಾಸ ಕಥನದಲ್ಲಿ ನೋಡುವ ನೋಟಗಳನ್ನು ಉಳಿದ ಲೇಖಕರು ಏಕೆ? ಕೊಡುವುದಿಲ್ಲ ಎಂಬುದನ್ನು ಈ ಅಧ್ಯಯನದಲ್ಲಿ ಗಮನಿಸಲಾಗುವುದು. ಲೇಖಕರ ಸಾಮಾಜಿಕ ಹಿನ್ನೆಲೆ ಅವರ ಲಿಂಗದ ಹಿನ್ನೆಲೆ. ಲೇಖಕರು ಕನ್ನಡ ಸಾಹಿತ್ಯದ ಯಾವ ಪಂಥಕ್ಕೆ ಸೇರಿದವರು, ಯಾವ ವಯಸ್ಸಿನವರು ಈ ಎಲ್ಲ ಹಿನ್ನೆಲೆಗಳು ಪ್ರವಾಸ ಕಥನದಲ್ಲಿ ಹೇಗೆ ಕೆಲಸ ಮಾಡಿವೆ ಎಂಬಿತ್ಯಾದಿ ಆಯಾಮಗಳಿಂದ ಪರಿಶೀಲಿಸಲಾಗುವುದು.

೬. ಪ್ರಸ್ತುತ ಪ್ರಬಂಧದಲ್ಲಿ ವಿಶ್ಲೇಷಣೆ ಮತ್ತು ವ್ಯಾಖ್ಯಾನಗಳನ್ನು ಮುಖ್ಯ ವಿಧಾನಗಳನ್ನಾಗಿ ಬಳಸಿಕೊಳ್ಳಲಾಗಿದೆ. ಸಾಧ್ಯವಿರುವ ಕಡೆಗಳಲ್ಲಿ ವಿಶ್ಲೇಷಣೆಯ ಆಧಾರದಲ್ಲಿ ತಾತ್ವೀಕರಣ ಮಾಡಲು ಪ್ರಯತ್ನಿಸಲಾಗಿದೆ.

## ೧.೪. ಪ್ರವಾಸ : ಪರಿಕಲ್ಪನಾತ್ಮಕ ತಾತ್ವಿಕ ಚರ್ಚೆ

ಸಾಮಾನ್ಯವಾಗಿ ವ್ಯಕ್ತಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಯಾವುದಾದರೂ ಕಾರ್ಯ ನಿಮಿತ್ತವಾಗಿ ಹೋಗಿ ಬರುವುದನ್ನು 'ಪ್ರವಾಸ' ಎಂದು ಕರೆಯುತ್ತೇವೆ. ಐತಿಹಾಸಿಕ ಮಹತ್ವ ಪಡೆದಿರುವ ನೈಸರ್ಗಿಕವಾಗಿ ಸುಂದರವಾಗಿರುವ, ರಾಜಕೀಯ ಪ್ರಾಬಲ್ಯಗಳಿಸಿರುವ, ಆರ್ಥಿಕವಾಗಿ ಮುಂದುವರಿದಿರುವ, ಪ್ರವಾಸಿ ಸೌಲಭ್ಯ ಇರುವ, ಶೈಕ್ಷಣಿಕವಾಗಿ ಪ್ರಗತಿಯನ್ನು ಸಾಧಿಸಿರುವ, ಸಾಂಸ್ಕೃತಿಕವಾಗಿ ಎಲ್ಲ ಕ್ಷೇತ್ರಗಳಲ್ಲಿ ಮುಂದುವರೆದಿರುವ, ಪ್ರದೇಶಗಳು ಸಾಮಾನ್ಯವಾಗಿ ಪ್ರವಾಸಿ ತಾಣಗಳಾಗಿರುತ್ತವೆ.

ಭಾರತೀಯರಲ್ಲಿ ಪ್ರವಾಸದ ಕಲ್ಪನೆ ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದೆ. ಧಾರ್ಮಿಕ ಸ್ಥಳಗಳಿಗೆ ಯಾತ್ರೆಗಳನ್ನು ಕೈಗೊಳ್ಳುವುದು ಹಿಂದಿನಿಂದಲೂ ರೂಢಿಯಲ್ಲಿದ್ದ ಸಂಗತಿ. ಆದರೆ ಭಾರತಕ್ಕೆ

ಹ್ಯೂಯೆನ್‌ತ್ಸಾಂಗ್, ಅಬ್ದುಲ್ ರಜಾಕ್, ಫಾಹಿಯಾನ, ಮುಂತಾದವರು ಪ್ರವಾಸಕ್ಕೆ ಬಂದಂತೆ, ಭಾರತೀಯರು ಪ್ರಾಚೀನ ಕಾಲದಲ್ಲಿ ವಿದೇಶಗಳಿಗೆ ಪ್ರವಾಸಕ್ಕೆ ಹೋದ ದಾಖಲೆಗಳು ಹೆಚ್ಚು ಸಿಗುವುದಿಲ್ಲ.

ಪ್ರವಾಸದ ಪ್ರಥಮ ಉದ್ದೇಶ ಮನರಂಜನೆ ಎಂದು ಮೇಲುನೋಟಕ್ಕೆ ಕಂಡರೂ ಅದರ ಜೊತೆಗೆ ಜ್ಞಾನದ ಸಂಪಾದನೆ ಉದ್ದೇಶವೂ ಅಡಗಿರುತ್ತದೆ. ಪ್ರವಾಸದಿಂದಾಗುವ ಪ್ರಯೋಜನವನ್ನು ಕುರಿತು ಫ್ರಾನ್ಸಿಸ್ ಬೇಕನ್ನನ ಪ್ರಸಿದ್ಧ ಹೇಳಿಕೆ ಹೀಗಿದೆ. "ಚಿಕ್ಕವರಿಗೆ ಪ್ರವಾಸ ಒಂದು ಶಿಕ್ಷಣ; ದೊಡ್ಡವರಿಗೆ ಒಂದು ಅನುಭವ". ಈ ಅನುಭವದ ಕಲ್ಪನೆ ಒಬ್ಬೊಬ್ಬರಲ್ಲಿ ಒಂದೊಂದು ಬಗೆಯದಾಗಿರಬಹುದು. ಪ್ರವಾಸಿಗಳು ಮನುಷ್ಯರನ್ನು ಅಭ್ಯಸಿಸುವುದಕ್ಕಿಂತ ವಸ್ತುಸಂಗತಿಗಳನ್ನು ಅಭ್ಯಾಸ ಮಾಡುವ ಅಪೇಕ್ಷೆ ಎಂದು 'ಲೊವೆಲ್' ಎಂಬುವವರು ಅಭಿಪ್ರಾಯಪಟ್ಟರೆ, ವಾಲ್ಟರ್ ಮುರ್ಡಾಕ್ ಅದಕ್ಕೆ ವಿರುದ್ಧವಾದ ಅಭಿಪ್ರಾಯ ವ್ಯಕ್ತಪಡಿಸುತ್ತಾನೆ. ವಸ್ತುಸಂಗತಿ ನೋಡಲು ತಿಳಿಯಲು ಪ್ರವಾಸ ಮಾಡಿದರೆ, ಹಿಂದಿರುಗಿದಾಗ ಗೆಳೆಯರಿಗೆ ತಲೆ ಕೊರೆಯುತ್ತೀರಿ. ಜನ ನೋಡಲು ಪ್ರವಾಸ ಮಾಡಿದರೆ, ಹಿಂತಿರುಗಿದಾಗ ಜೀವನಾನುಭವ ತರುತ್ತೀರಿ ಎನ್ನುತ್ತಾನೆ ಆತ. ಇಷ್ಟೆಲ್ಲ ಹೇಳಿದರೂ ಬಹುಶಃ ಆರ್.ಎಲ್. ಸ್ಟೀಮನ್‌ಸನ್‌ನ ಮಾತು ಅಂತಿಮ ಎಂಬಂತೆ ತೋರುತ್ತದೆ. "ನನ್ನ ಮಟ್ಟಿಗೆ ಹೇಳುವುದಾದರೆ, ಎಲ್ಲಿಗಾದರೂ ಹೋಗಬೇಕೆಂದು ಪ್ರವಾಸ ಮಾಡುವುದಿಲ್ಲ. 'ಹೋಗು'ವುದು ನನಗೆ ಮುಖ್ಯ. ಪ್ರವಾಸಕ್ಕಾಗಿ ಪ್ರವಾಸ ಮಾಡುತ್ತೇನೆ. ಚಲಿಸುವುದು, ಹೋಗುವುದು ಮಹತ್ವದ್ದಾಗಿದೆ. "ದಿ ಗ್ರೇಟ್ ಅಫೇರ್ ಈಸ್ ಟು ಮೂವ್" ಎಂಬಲ್ಲಿ ಪ್ರವಾಸಿಯ ಮೂಲ ತುಡಿತ ವ್ಯಕ್ತವಾಗುತ್ತದೆ. 'ಕೋಶ ಓದುವುದಕ್ಕಿಂತ ದೇಶ ನೋಡುವುದು ಮೇಲು' ಎಂಬ ಗಾದೆಯಲ್ಲಿ ಸ್ವಾನುಭವದ ಮಹತ್ವಕ್ಕೆ ಒತ್ತು ಇದೆ. ಮಾರ್ಕೋ ಪೋಲೊ, ಚೀನಾ ಯಾತ್ರಿಕರು ವಸಾಹತು ನೆಲೆಗೊಳಿಸಿದ ಸಾಹಸಿಗಳಂತಹವರ ಕಥೆಗಳು ಆ ಅದಮ್ಯ ಪ್ರವೃತ್ತಿಯ ಚರಿತೆಗಳಾಗಿವೆ"[೧] (ಪ್ರವಾಸ ಸಾಹಿತ್ಯ : ಒಂದು ಅಧ್ಯಯನ, ಪು. ೫೦).

ಪ್ರವಾಸ ಪರಿಕಲ್ಪನೆಯನ್ನು ಅನೇಕ ವಿದ್ವಾಂಸರ ಚರ್ಚಿಸಿದಾಗಲೂ ಅದರಲ್ಲಿ ಪಡೆಯುವ ಜ್ಞಾನ ಹಾಗೂ ಅನುಭವ ಪುಸ್ತಕವನ್ನು ಅಭ್ಯಸಿಸಿದರೆ ಲಭಿಸದು ಎಂಬುದು ಮನದಟ್ಟಾಗುತ್ತದೆ. ಆದರೆ ಪ್ರವಾಸ ಮಾಡುವವರು ಯಾವ ವರ್ಗಕ್ಕೆ ಸೇರಿದವರು? ಅದರಿಂದ ಬರುತ್ತಿರುವ ಅನುಭವ ಲೋಕ ಎಂತಹದು? ಯಾರು ಪ್ರವಾಸ ಕಥನಗಳನ್ನು ರಚಿಸಿದ್ದಾರೆ? ಸಮಾಜದ ಕೆಳಸ್ತರದ ಜನರು ಪ್ರವಾಸಕ್ಕೆ ಹೋಗುತ್ತಾರೆಯೇ? ಹೋದರೂ ಅವರ ಪ್ರವಾಸ ಕಥನಗಳಿಗೆ ಪ್ರತಿಕ್ರಿಯೆ ಯಾವ ರೀತಿಯದ್ದು? ಎಂಬ ಪ್ರಶ್ನೆಗಳನ್ನು ಹಾಕಿಕೊಂಡಾಗ ಪ್ರವಾಸ ಕಥನಗಳ ಸ್ವರೂಪದಲ್ಲಿ ಇರುವ ವ್ಯತ್ಯಾಸಗಳು ಗೋಚರವಾಗುತ್ತವೆ.

ಸಾಮಾನ್ಯವಾಗಿ ವಿದೇಶ ಪ್ರವಾಸಗಳನ್ನು ಹಣ, ಇಂಗ್ಲೀಷ್ ಭಾಷೆ ಹಾಗೂ ಉನ್ನತ ಶಿಕ್ಷಣ ಪಡೆದವರು ಹೆಚ್ಚಾಗಿ ಮಾಡುತ್ತಾರೆ. ಕನ್ನಡದ ಪ್ರವಾಸ ಕಥನಗಳನ್ನು ಗಮನಿಸಿದಾಗ ಅಲ್ಲಿ ಪ್ರವಾಸ ಕೈಗೊಂಡವರು ಸಮಾಜದ ಮೇಲುಜಾತಿಯ ಹಾಗೂ ಮಧ್ಯಮವರ್ಗದ ಜನ ಹೆಚ್ಚಾಗಿ ಇರುವುದು ಕಂಡು ಬರುತ್ತದೆ. ಪ್ರವಾಸ ಕಥನಗಳು ಸುವ್ಯವಸ್ಥೆ ಇರುವ ಪ್ರದೇಶಗಳನ್ನು ಮತ್ತು ನೈಸರ್ಗಿಕವಾಗಿ ಸುಂದರವಾಗಿ ಇರುವ ಪ್ರದೇಶಗಳನ್ನು ವರ್ಣಿಸಿರುವುದು ಹೆಚ್ಚಾಗಿ ಗೋಚರಿಸುತ್ತವೆ. ಇದಕ್ಕೆ ತಕ್ಕಂತೆ ಆಲೋಚನಾಕ್ರಮ

ಪ್ರವಾಸ ಕಥನಗಳಲ್ಲಿ ವ್ಯಕ್ತವಾಗಿದೆ. ಹೆಚ್ಚಾಗಿ ಸಮಾಜದ ಕೆಳಸ್ತರದ ಜನರು ವಿದೇಶ ಪ್ರವಾಸಗಳನ್ನು ಕೈಗೊಂಡಿರುವುದಿಲ್ಲ. ವಿದೇಶಗಳಿಗೆ ಪ್ರವಾಸಕ್ಕೆ ಹೋಗುವ ಅವಕಾಶ ಹಾಗೂ ಸಾಮರ್ಥ್ಯ ಅವರಿಗೆ ಕಡಿಮೆ.

ಪ್ರವಾಸ ಕಥನಗಳು ಅನೇಕ ಕಾರಣಗಳಿಗಾಗಿ ಹೋದವರುಗಳಿಂದ ರಚನೆ ಮಾಡಿದವುಗಳಾಗಿರುತ್ತವೆ.

೧. ಪ್ರವಾಸದ ಹವ್ಯಾಸ ಉಳ್ಳವರು ಪ್ರವಾಸ ಮಾಡುವುದರಿಂದ;

೨. ಅಧ್ಯಯನಕ್ಕಾಗಿ ಪ್ರವಾಸ ಮಾಡುವುದರಿಂದ;

೩. ವ್ಯಾಪಾರಕ್ಕಾಗಿ ಪ್ರವಾಸ ಕೈಗೊಳ್ಳುವುದರಿಂದ;

೪. ಧಾರ್ಮಿಕ ಕ್ಷೇತ್ರಗಳ ದರ್ಶನಕ್ಕಾಗಿ ಪ್ರವಾಸ ಮಾಡುವುದರಿಂದ;

೫. ನೌಕರಿಗಾಗಿ ಪ್ರವಾಸ ಮಾಡುವುದರಿಂದ;

ಪ್ರವಾಸ ಸಾಹಿತ್ಯವನ್ನು ಮುಖ್ಯವಾಗಿ ಮೂರು ಪ್ರಕಾರಗಳಲ್ಲಿ ವಿಂಗಡಿಸಲಾಗುತ್ತದೆ. ಅವೆಂದರೆ;

೧. ಗ್ರಾಮೀಣ ಪ್ರವಾಸ ಸಾಹಿತ್ಯ:- ಉದಾಹರಣೆಗೆ - ಬಾಗಿಳಿಯೇ ಬಾಗಳಿಗೆ - ಪಂಡಿತಾರಾಧ್ಯ ಹೊಮ.

೨. ಅನ್ಯರಾಜ್ಯ ಪ್ರವಾಸ ಸಾಹಿತ್ಯ:- ಉದಾಹರಣೆಗೆ - ಜನಗಣಮನ - ಎಚ್.ಎಸ್. ರಾಘವೇಂದ್ರರಾವ್, ಗಂಗೆಯ ಶಿಖರಗಳಲ್ಲಿ - ಡಾ. ಜಿ.ಎಸ್. ಶಿವರುದ್ರಪ್ಪ.

೩. ಅನ್ಯದೇಶ ಪ್ರವಾಸ ಸಾಹಿತ್ಯ:- ಉದಾಹರಣೆಗೆ - ಅಪೂರ್ವ ಪಶ್ಚಿಮ - ಶಿವರಾಮ ಕಾರಂತ, ಅಮೆರಿಕದಲ್ಲಿ ಗೊರೂರು - ಗೊರೂರು ರಾಮಸ್ವಾಮಿ ಅಯ್ಯಂಗಾರ್.

ಪ್ರವಾಸಕ್ಕೆ ಪ್ರೇರಣೆಯಾಗಿ ಅನೇಕ ಅಂಶಗಳಿವೆ ಎಂಬುದನ್ನು ವಿದ್ಯಾಶಂಕರ್ ಅವರು ಗುರುತಿಸುತ್ತಾರೆ.[೨] ಮುಖ್ಯವಾಗಿ ಅವು ಇಂತಿವೆ :

೧. **ಶಾರೀರಕ ಪ್ರೇರಣೆ** : ಇದು ಶಾರೀರಿಕ ವಿಶ್ರಾಂತಿ ಹಾಗೂ ವಿರಾಮ, ನಿರ್ದಿಷ್ಟ ವೈದ್ಯಕೀಯ ಚಿಕಿತ್ಸೆಗೆ ಸಂಬಂಧಿಸಿದ್ದಾಗಿರುತ್ತದೆ.

೨. **ಸಾಂಸ್ಕೃತಿಕ ಪ್ರೇರಣೆ** : ಅನ್ಯದೇಶ ಹಾಗೂ ಅವುಗಳ ಜನರು, ಅವರ ಕಲೆ, ಸಂಗೀತ, ಸಾಹಿತ್ಯ, ಜಾನಪದ ಇತ್ಯಾದಿಗಳಲ್ಲಿ ಅಭಿವ್ಯಕ್ತಗೊಂಡಿರುವ ಸಾಂಸ್ಕೃತಿಕ ಪರಂಪರೆ - ಇವನ್ನು ತಿಳಿಯಬೇಕೆಂಬ ವ್ಯಕ್ತಿಯೋರ್ವನ ಆಸೆಗೆ ಇದು ಸಂಬಂಧಿಸಿರುತ್ತದೆ.

೩. **ವ್ಯಕ್ತಿಯ ಅಂತರ್ ಪ್ರೇರಣೆ** : ಬಂಧು-ಮಿತ್ರರನ್ನು ಭೇಟಿ ಮಾಡುವುದು ದಿನನಿತ್ಯದ ಯಾಂತ್ರಿಕ ಬದುಕಿನಿಂದ ಬಿಡಿಸಿಕೊಂಡು ಹೋಗುವುದಕ್ಕೆ ಸಂಬಂಧಿಸಿದೆ.

೪. **ಅಂತಸ್ತು ಹಾಗೂ ಪ್ರತಿಷ್ಠೆಯ ಪ್ರೇರಣೆ** : ಇವು ವೈಯಕ್ತಿಕ ಗೌರವ ಹಾಗೂ ವೈಯಕ್ತಿಕ ಪ್ರಗತಿಯ ಅಗತ್ಯದ ಜೊತೆ ಗುರುತಿಸಲ್ಪಡುತ್ತವೆ. ಇವು ವ್ಯಾಪಾರಕ್ಕಾಗಿ ಪ್ರವಾಸ ಅಥವಾ ವೃತ್ತಿ ಸಂಬಂಧಗಳಿಗಾಗಿ ಹೋಗುವುದಕ್ಕೆ ಸಂಬಂಧಿಸಿವೆ.

೫. **ಸಂತೋಷ** : ದೈನಂದಿನ ಯಾಂತ್ರಿಕ ಬದುಕಿನಿಂದ ಹೊರಬರಬೇಕೆಂಬುದು ಬಹುಶಃ ಈ ಹೊತ್ತಿನ ಅತ್ಯಂತ ಪ್ರಮುಖವಾದ ಪ್ರೇರಣೆ ಎನ್ನಬಹುದು. ಪ್ರಕೃತಿಯ ನಿಸರ್ಗದಲ್ಲಿ ವ್ಯಕ್ತಿಯೋರ್ವನು ಸಾಧ್ಯವಾದಷ್ಟುಮಟ್ಟಿಗೆ ತಮಾಷೆ ಸಂಭ್ರಮ ಹಾಗೂ ಒಳ್ಳೆಯ ಮನರಂಜನೆಯನ್ನು ಹೊಂದಬೇಕೆಂದು ಅಪೇಕ್ಷೆ ಪಡುವನು.

೬. **ವಿಶ್ರಾಂತಿ ಹಾಗೂ ಮನರಂಜನೆ** : ಆಧುನಿಕ ಜೀವನದ ಮೇಲೆ ಕೈಗಾರೀಕರಣ ಹಾಗೂ ನಗರೀಕರಣ ಅತ್ಯಧಿಕ ಒತ್ತಡವನ್ನುಂಟುಮಾಡಿದೆ. ಆಧುನಿಕ ನಗರ ಜೀವನದ ಒತ್ತಡ ಹಾಗೂ ಹೊರೆಗಳಿಂದ ಬಿಡುಗಡೆಗೊಂಡು ಪ್ರಶಾಂತವೂ ಆರೋಗ್ಯಕರವೂ ಅದು ಪರಿಸರದಲ್ಲಿ ವಿಶ್ರಾಂತಿ ಪಡೆಯಲು ಜನರು ಇಚ್ಛಿಸುವರು. ಶರೀರ ಹಾಗೂ ಮನಸ್ಸನ್ನು ಪ್ರಸನ್ನವಾಗಿರಿಸಲು ವಿಶ್ರಾಂತಿ ತೀರಾ ಅಗತ್ಯ. ಹಲವರಿಗೆ ಇದು ವಾತಾವರಣದ ಬದಲಾವಣೆಯಿಂದ ದೊರೆಯುತ್ತದೆ. ಮತ್ತೆ ಕೆಲವರಿಗೆ ಸೂರ್ಯನ ಕಿರಣದಿಂದ ಸಮುದ್ರ ದಂಡೆಯ ಸಡಗರ ಸಂಭ್ರಮಗಳಿಂದ ದೊರೆಯುತ್ತದೆ. ಕೆಲವರು ಹೊಸ ಸ್ಥಳಗಳ ದರ್ಶನದಿಂದ ಹೊಸಬರನ್ನು ಭೇಟಿ ಮಾಡುವುದರಿಂದ ಹಾಗೂ ಹೊಸ ಅನುಭವಗಳನ್ನು ಪಡೆಯುವುದರಿಂದ ವಿಶ್ರಾಂತಿಯನ್ನು ಹೊಂದುವರು.

೭. **ಕ್ರೀಡೆಗಳಲ್ಲಿ ಭಾಗವಹಿಸುವುದು** : ಪರ್ವತ ಶಿಖರಾರೋಹಣ ಸಂಚಾರ, ನೀರ್ಗಲ್ಲ ಮೇಲೆ ಜಾರಾಟ. ಸಮುದ್ರಯಾನ ಮಾಡುವುದು ಗಾಳಿಯ ಪ್ರಯಾಣ ಮಾಡುವುದು, ದೋಣಿ ವಿಹಾರ ತೆರೆನೊರೆ ಸವಾರಿ ಇತ್ಯಾದಿ ವೈವಿಧ್ಯಮಯವಾದ ಕ್ರೀಡಾ ಚಟುವಟಿಕೆಗಳಲ್ಲಿ ಭಾಗವಹಿಸುವುದು ದಿನದಿನಕ್ಕೆ ಹೆಚ್ಚುತ್ತಿದೆ. ಅದಕ್ಕಾಗಿಯೇ ಪ್ರವಾಸಗಳನ್ನು ಕೈಗೊಳ್ಳುವರು.

೮. **ಕುತೂಹಲ ಸಂಸ್ಕೃತಿ** : ಚಾರಿತ್ರಿಕ ಮಹತ್ವವುಳ್ಳ ಅಥವಾ ಪ್ರಾಚೀನ ಇತಿಹಾಸದೊಂದಿಗೆ ಸಂಬಂಧ ಹೊಂದಿರುವ ಸಾಂಸ್ಕೃತಿಕ ಮಹತ್ವವುಳ್ಳ ಸ್ಥಳಗಳಿಗೆ ಹೆಚ್ಚು ಹೋಗುತ್ತಿರುವುದು ಕಂಡು ಬರುತ್ತಿದೆ. ಕಲಾ ಮಹೋತ್ಸವ, ಸಂಗೀತ ಮಹೋತ್ಸವ ಇತರೆ ಸಾಂಸ್ಕೃತಿಕ ಮಹತ್ವ ಇರುವ ಸ್ಥಳಗಳಿಗೆ ಜನರು ಹೆಚ್ಚು ಹೋಗುತ್ತಾರೆ. ಬೇರೆ ದೇಶಗಳ ಜನ ಸಂಸ್ಕೃತಿ ಪ್ರಕೃತಿ ವಿಸ್ಮಯಗಳ ಬಗೆಗೆ ತಿಳಿಯುವ ಕೂತೂಹಲ ಇದ್ದೇ ಇದೆ. ಆದ್ದರಿಂದ ಕೂತೂಹಲವೂ ಪ್ರಮುಖ ಪ್ರೇರಣೆ ಆಗಿದೆ.

೯. **ವೃತ್ತಿ ಮತ್ತು ವ್ಯಾಪಾರ** : ವೃತ್ತಿ, ಉದ್ಯಮ, ವಾಣಿಜ್ಯ ಅಥವಾ ಸಂಸ್ಥೆಗಳಿಗೆ ಸಂಬಂಧಿಸಿದಂತೆ ನಡೆಯುವ ಸಭೆ ಸಮಾವೇಶಗಳಿಗೆ ಸಂಬಂಧಪಟ್ಟವರು ಹೋಗಿ ಬರುವುದು ರೂಢಿಯಾಗಿದೆ. ಅನೇಕ ದೇಶಗಳು ಪ್ರವಾಸಿಗರನ್ನು ಆಕರ್ಷಿಸುವ ಸಲುವಾಗಿ ಬೃಹತ್ ಸಭಾ ಸಂಕೀರ್ಣಗಳನ್ನು ಏರ್ಪಡಿಸುತ್ತಿವೆ. ಅಲ್ಲಿ ವ್ಯಾಪಾರ ಸಂಬಂಧವಾದ ಸಭೆ, ವಿಚಾರ ಸಂಕಿರಣಗಳು, ಗೋಷ್ಠಿಗಳು ನಡೆಯಲು ಎಲ್ಲ

ಬಗೆಯ ಆಧುನಿಕ ಸೌಲಭ್ಯಗಳನ್ನು ಕಲ್ಪಿಸಲಾಗುತ್ತದೆ. ಅಂತಾರಾಷ್ಟ್ರೀಯ ಮಟ್ಟದ ಸಾಹಿತ್ಯಿಕ ಚರ್ಚೆ, ರಾಜಕೀಯ, ಆರ್ಥಿಕ ಚರ್ಚೆಗಳಲ್ಲಿ ಭಾಗವಹಿಸುವ ಪ್ರತಿಯೊಬ್ಬರೂ ಪ್ರವಾಸದ ಅನುಭವವನ್ನು ಹೊಂದುವಂತಹವರಾಗಿರುತ್ತಾರೆ.

ಸಾಮಾನ್ಯವಾಗಿ ಪ್ರವಾಸದಲ್ಲಿ ಅನೇಕ ಸಂಗತಿಗಳು ಒಳಗೊಂಡಿರುತ್ತವೆ. ಇತಿಹಾಸ ಭೂಗೋಳ, ಸಮಾಜಶಾಸ್ತ್ರ, ತತ್ವಶಾಸ್ತ್ರ, ಅರ್ಥಶಾಸ್ತ್ರ, ರಾಜಕೀಯ, ಐತಿಹ್ಯ, ಪುರಾಣ, ಸಂಸ್ಕೃತಿ, ಸಾಹಿತ್ಯ, ಜಾನಪದ - ಹೀಗೆ ಅನೇಕ ಅಂಶಗಳನ್ನು ಪ್ರವಾಸವು ಒಳಗೊಂಡಿರುತ್ತದೆ. ಇಂತಹ ಪ್ರವಾಸಗಳಿಗೆ ಲೇಖಕರು ತಮ್ಮದೇ ಆದ ದೃಷ್ಟಿಕೋನದಲ್ಲಿ ಚಿಂತನಾಕ್ರಮದಲ್ಲಿ ಗ್ರಹಿಸಿ ಪ್ರವಾಸ ಕಥನಗಳನ್ನು ರಚಿಸುತ್ತಾರೆ. ಈ ಕಾರಣದಿಂದ ಪ್ರವಾಸ ಕಥನಗಳು ಸಂಕೀರ್ಣ ಸ್ವರೂಪವನ್ನು ಪಡೆದಿರುತ್ತವೆ. ಹೀಗಾಗಿ ಅದನ್ನು ಹಲವಾರು ನೆಲೆಗಳಿಂದ ಅಧ್ಯಯನ ಮಾಡುವುದು ಅಗತ್ಯವಾಗಿದೆ.

## ೧.೫. ಅಧ್ಯಯನ ಸಮೀಕ್ಷೆ

ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳ ಅಧ್ಯಯನ ಎಂಬ ವಿಷಯಕ್ಕೆ ಆ ಮೂರು ಪ್ರವಾಸ ಕಥನಗಳ ಬಗೆಗೆ ಬಂದಿರುವ ವಿಮರ್ಶೆಗಳನ್ನು ಕುರಿತು ಸಮೀಕ್ಷೆ ಮಾಡುವುದು ಪ್ರಸ್ತುತ ಅಧ್ಯಯನದ ಸಾಧ್ಯತೆಯ ಬಗ್ಗೆ ಒಂದು ಚಿತ್ರವನ್ನು ಕೊಡುತ್ತದೆ. ಮೂರು ಪ್ರವಾಸ ಕಥನಗಳ ಬಗೆಗೆ ವಿಮರ್ಶೆ ಮಾಡಿದ ಲೇಖಕರ ವಿಮರ್ಶೆಗಳನ್ನು ಕ್ರಮವಾಗಿ ಈ ಕೆಳಗಿನಂತೆ ನೋಡಬಹುದಾಗಿದೆ.

ಎ.ಎನ್. ಮೂರ್ತಿರಾವ್ ಅವರ 'ಅಪರವಯಸ್ಕನ ಅಮೆರಿಕಯಾತ್ರೆ' ಪ್ರವಾಸ ಕಥನ ಕುರಿತು, ಎನ್.ಎಸ್. ತಾರಾನಾಥ ಅವರು ತಮ್ಮ 'ಸಹಚರ' ಎಂಬ ವಿಮರ್ಶಾ ಕೃತಿಯಲ್ಲಿ ವಿಮರ್ಶಿಸಿದ್ದಾರೆ. ಅವರು ಈ ಪ್ರವಾಸ ಕಥನವನ್ನು ಕುರಿತು ಈ ರೀತಿ ಹೇಳುತ್ತಾರೆ. "ಇದು ಪ್ರವಾಸಿಯೊಬ್ಬನ ನೀರಸ ನಿರೂಪಣೆಯಲ್ಲ; ಶುಷ್ಕ ವರದಿಯಲ್ಲ; ಎರಡು ಸಂಸ್ಕೃತಿಗಳು ಎದುರುಬದುರಾಗುವ ಮಹತ್ವಪೂರ್ಣ ಕೃತಿ"[೨] (ಪು. ೧೦೩).

ತಾರಾನಾಥರವರು ಹೇಳುವಂತೆ, ಶುಷ್ಕ ವರದಿಯಲ್ಲ ಎನ್ನುವುದನ್ನು ಒಪ್ಪಲು ಕಷ್ಟವೆನಿಸುತ್ತದೆ. ಮೂರ್ತಿರಾವ್ ಅವರು ತಮ್ಮ ಪ್ರವಾಸ ಕಥನದಲ್ಲಿ ಅನೇಕ ಕಡೆ ಅಮುಖ್ಯ ಎನಿಸುವ ಸಂದರ್ಭಗಳನ್ನು ದಾಖಲಿಸುತ್ತಾರೆ. ಅವು ಶುಷ್ಕ ವರದಿಯ ರೂಪದಲ್ಲಿರುತ್ತವೆ. ಉದಾಹರಣೆಗೆ ವಿಮಾನಯಾನದ ಅನುಭವ ಕುರಿತ ಭಾಗವು (ಪು. ೧೧) ಸಾಮಾನ್ಯ ತಿಳುವಳಿಕೆಯದ್ದಾಗಿದ್ದು ಶುಷ್ಕವಾದದ್ದಾಗಿದೆ. ಇಂತಹ ಅನೇಕ ಸನ್ನಿವೇಶಗಳು ಪ್ರವಾಸ ಕಥನದಲ್ಲಿ ಕಂಡು ಬರುತ್ತವೆ. ಇವುಗಳನ್ನು ತಾರಾನಾಥರವರು ಗಮನಿಸಿದಂತೆ ಕಂಡು ಬರುವುದಿಲ್ಲ.

ತಾರನಾಥರವರ ಪ್ರವಾಸ ಕಥನದ ವಿಮರ್ಶೆಯಲ್ಲಿ ಕೆಲವು ಮೆಚ್ಚುಗೆಯ ಅಂಶಗಳು ಕಂಡು ಬರುತ್ತವೆ. ಅದರಲ್ಲಿ ಪ್ರವಾಸ ಕಥನಗಳು ಮತ್ತೊಬ್ಬ ಪ್ರವಾಸಿಗೆ ಮಾರ್ಗದರ್ಶನ ಮಾಡುವಲ್ಲಿ ಸಹಾಯಕವಾಗುತ್ತವೆ ಎಂಬುದು ಒಂದು. ಈ ಅಭಿಪ್ರಾಯ ನಿಜವಾಗಿದೆ. ಕೇವಲ ಮನರಂಜನೆಗಾಗಿ

ಪ್ರವಾಸ ಕಥನಗಳು ರಚಿತವಾಗುವುದಿಲ್ಲ. ಅವುಗಳು ಆಯಾ ಸ್ಥಳಗಳ ಪರಿಚಯ ಭೌಗೋಳಿಕ ಸನ್ನಿವೇಶಗಳನ್ನು ಚಿತ್ರಿಸುವುದರಿಂದ ಮತ್ತೊಬ್ಬ ಪ್ರವಾಸಿಗೆ ಮಾರ್ಗದರ್ಶಿ ರೂಪದಲ್ಲಿ ಸಹಾಯ ಮಾಡುತ್ತವೆ ಎಂಬುದು ಒಪ್ಪುವಂತಹ ಮಾತಾಗಿದೆ.

"ಪೂರ್ವ, ಪಶ್ಚಿಮ, ಸಂಪ್ರದಾಯ, ಆಧುನಿಕತೆ, ನಂಬಿಕೆ, ಅನುಮಾನ, ಹಿಂದೂಧರ್ಮ, ಕ್ರೈಸ್ತ ಧರ್ಮಗಳು" ಈ ಕೃತಿಯಲ್ಲಿ ಮುಖಾಮುಖಿಯಾಗಿವೆ. ಒಂದೇ ಕುಟುಂಬದ ವರ್ತುಲದಲ್ಲಿ ಎರಡು ಭಿನ್ನ ಸಂಸ್ಕೃತಿಗಳು ಒಡನಾಡುವಾಗ ಅದನ್ನು ಸಂಘರ್ಷವೆಂದು ಭಾವಿಸದೆ, ಸಂಗಮವೆಂದು ತಿಳಿಯುವ ಸುಸಂಸ್ಕೃತ ಮನಸ್ಸಿನ ಪರಿಣಿತ ತಿಳುವಳಿಕೆ ಇಲ್ಲಿದೆ. ಸಂಪ್ರದಾಯದ ಮೌಢ್ಯ-ಕಂದಾಚಾರಗಳನ್ನು ತಿರಸ್ಕರಿಸುತ್ತಲೇ ಪರಂಪರಾಗತ ಮೌಲ್ಯಗಳಿಗೆ ಬೆಲೆಗೊಡುವ ವಿವೇಕವಿದೆ. ಇತರರ ಅಭಿಪ್ರಾಯ ತಿಳುವಳಿಕೆಗಳನ್ನು ಸಮತೋಲನ ಚಿತ್ತದಿಂದ ನೋಡುವ ಅಪೂರ್ವ ಸಂಸ್ಕಾರವಿದೆ"[೬] (ಸಹಚರ, ಪು. ೧೦೩).

ಇಡೀ ಕೃತಿಯ ಸಾರವನ್ನು ಮೂರ್ತಿರಾವ್ ಅವರ ವ್ಯಕ್ತಿತ್ವವನ್ನು ಆದರದಿಂದ ವಿಮರ್ಶಿಸಿರುವ ತಾರಾನಾಥರವರ ಮಾತುಗಳು ಮೆಚ್ಚುವಂತವುಗಳಾಗಿವೆ. ವಿಮರ್ಶಕರಾಗಿ ಅವರು ಒಂದು ಕೃತಿಯನ್ನು ಗ್ರಹಿಸುವ ಕೌಶಲ್ಯವನ್ನು ಇಲ್ಲಿ ಕಾಣಬಹುದು. ಕೃತಿಯನ್ನು ಸಮಗ್ರವಾಗಿ ಅಧ್ಯಯನ ಮಾಡಲು ಲೇಖಕರ ವ್ಯಕ್ತಿತ್ವವೂ ಸಹಾಯಕವಾಗುತ್ತದೆ ಎಂಬುದನ್ನು ತಾರಾನಾಥ ಅವರು ನಂಬಿದ್ದಾರೆ. ಮೂರ್ತಿರಾವ್ ಅವರ ಸರಳತೆ, ಸಮಾನತೆಯ ಪರವಾಗಿ ಸೌಹಾರ್ದಯುತ ಮನೋಭಾವನೆಗಳು ಪ್ರವಾಸ ಕಥನದಲ್ಲಿ ಹೇಗೆ ವ್ಯಕ್ತವಾಗಿವೆ ಎಂಬುದನ್ನು ಅವರು ಗುರುತಿಸಿದ್ದಾರೆ.

'ಅಪರವಯಸ್ಕನ ಅಮೆರಿಕಯಾತ್ರೆ'ಯನ್ನು ಕುರಿತು ಪ್ರೊ.ಎಂ.ಹೆಚ್. ಕೃಷ್ಣಯ್ಯ ಅವರು 'ಪ್ರವಾಸ ಸಾಹಿತ್ಯ : ಒಂದು ಅಧ್ಯಯನ' ಎಂಬ ಕೃತಿಯಲ್ಲಿ ವಿಮರ್ಶೆಗೆ ಒಳಪಡಿಸಿದ್ದಾರೆ. ಅವರು 'ಕನ್ನಡದಲ್ಲಿ ಪ್ರವಾಸ ಸಾಹಿತ್ಯ : ಅಮೆರಿಕ' ಎಂಬ ತಮ್ಮ ಲೇಖನದಲ್ಲಿ ಮೂರ್ತಿರಾವ್ ಅವರ 'ಅಪರವಯಸ್ಕನ ಅಮೆರಿಕಯಾತ್ರೆ'ಯನ್ನು ಮತ್ತು ಬಿ.ಜಿ.ಎಲ್. ಸ್ವಾಮಿಯವರ 'ಅಮೆರಿಕದಲ್ಲಿ ನಾನು' ಎಂಬ ಎರಡೂ ಕೃತಿಗಳನ್ನು ವಿಮರ್ಶಿಸಿದ್ದಾರೆ. ಮೂರ್ತಿರಾವ್ ಅವರ ಪ್ರವಾಸ ಕಥನವನ್ನು ಕೃಷ್ಣಯ್ಯ ಅವರು ಈ ಕೆಳಗಿನಂತೆ ವಿಮರ್ಶಿಸಿದ್ದಾರೆ.

ಎ.ಎನ್. ಮೂರ್ತಿರಾವ್ ಅವರ 'ಅಪರವಯಸ್ಕನ ಅಮೆರಿಕಯಾತ್ರೆ' ಪ್ರವಾಸ ಕಥನವಾದರೂ ಬದುಕು ಧರ್ಮ ಬಗೆಗಿನ ಚಿಂತನೆ, ಆಳವಾದ ಮಾನವ ಸಂಬಂಧಗಳ ವಿವೇಚನೆ, ಮಂಥನಗಳಿಂದ ಪರಿಪಕ್ವ ವ್ಯಕ್ತಿಯ ಅನುಭವಗಳ ನಿರೂಪಣೆಯಾಗಿದೆ"[೭] (ಪ್ರವಾಸ ಸಾಹಿತ್ಯ:ಒಂದು ಅಧ್ಯಯನ, ಪು.೬೩).

ಕೃಷ್ಣಯ್ಯ ಅವರು ಪ್ರವಾಸ ಕಥನದಲ್ಲಿ ನಿರೂಪಿತವಾಗಿರುವ ಅಂಶಗಳನ್ನು ಹೇಳಿದ್ದಾರೆಯೇ ಹೊರತು ಏಕೆ ಹಾಗೆ ನಿರೂಪಣೆಯಾಗಿವೆ ಎಂಬುದನ್ನು ವಿಶ್ಲೇಷಿಸುವುದಿಲ್ಲ. ಸಾಮಾನ್ಯವಾಗಿ ನಿರ್ಧಾರ ಮಾಡುವ ಅಂಶಗಳು ಯಾವಾಗಲೂ ಕೂಡ ಹಿರಿಯರಿಗೆ ಸಂಬಂಧಿಸಿದವುಗಳು ಆಗಿರುತ್ತವೆ. ಅವುಗಳಿಗೆ ಅನುಭವದ ಅವಶ್ಯಕತೆ ಇದೆ. ಆದುದರಿಂದ ಮೂರ್ತಿರಾವ್ ಅವರು ಒಬ್ಬ ಹಿರೀಕರಾಗಿ, ಪಕ್ವವಾದ ಆಳವಾದ

ಆಲೋಚನಾಕ್ರಮ ಕೈಗೊಳ್ಳುತ್ತಾರೆ. ಅವರಿಗೆ ತಮ್ಮ ವಯಸ್ಸಿನ ಅನುಭವವೂ ಇದಕ್ಕೆ ಸಹಾಯಕಾರಿಯಾಗಿದೆ. ಅದನ್ನು ಕೃಷ್ಣಯ್ಯ ಅವರು ಗಮನಿಸಿದಂತಿಲ್ಲ.

ಬಿ.ಜಿ.ಎಲ್. ಸ್ವಾಮಿಯವರ 'ಅಮೆರಿಕದಲ್ಲಿ ನಾನು' ಕೃತಿಯನ್ನು ಪ್ರೊ. ಎಂ.ಹೆಚ್. ಕೃಷ್ಣಯ್ಯ ಅವರು ವಿಮರ್ಶಿಸಿದ್ದಾರೆ. ಈ ಕೃತಿಯನ್ನು ಕೃಷ್ಣಯ್ಯ ಅವರು ಮುಖ್ಯವಾಗಿ ಲೇಖಕ ಕೇಂದ್ರಿತವಾಗಿ ವಿಮರ್ಶೆಸಿರುವುದು ಕಂಡುಬರುತ್ತದೆ. ಈ ಕೃತಿಯನ್ನು ಕುರಿತು ಆಡುವ ಕೆಲವು ಮಾತುಗಳು ಇಂತಿವೆ :

"ಅಮೆರಿಕ ಬಗ್ಗೆ ಬರೆಯುವ ಬಹು ಬರಹಗಾರರು ಅಲ್ಲಿನ ಬದುಕಿನ ಶ್ರೀಮಂತಿಕೆ, ವಿಜ್ಞಾನ-ತಂತ್ರಜ್ಞಾನ ಪ್ರಗತಿಯ ಬೆರಗುಗಳು, ಮೋಜುಗಾರಿಕೆ ಮೊದಲಾದವನ್ನು ವಾಸ್ತವವೆಂದರೂ ಆಶ್ಚರ್ಯ ಮೂಡಿಸುವಂತೆ ಮೋಡಿ ಹಾಕಿದಂತೆ ವರ್ಣಿಸುತ್ತಾರೆ, ವಿವರಿಸುತ್ತಾರೆ. ಅನ್ಯ ಸ್ವರ್ಗದ ಕಲ್ಪನೆ ಬೇಕಿಲ್ಲ ಎಂಬಂತೆ. ಸ್ವಾಮಿಯವರದು ಯಾವಾಗಲೂ ವಕ್ರದೃಷ್ಟಿ. ವಕ್ರಮಸೂರವುಳ್ಳ ಕ್ಯಾಮರಾದಿಂದ ಬಿಂಬ ಗ್ರಹಿಸಿದಂತೆ"[೫] (ಪ್ರವಾಸ ಸಾಹಿತ್ಯ: ಒಂದು ಅಧ್ಯಯನ, ಪು. ೬೦).

ಕೃಷ್ಣಯ್ಯನವರು ಅಮೆರಿಕ ಪ್ರವಾಸ ಕಥನಗಳನ್ನು ಬರೆದಿರುವ ಅನೇಕ ಲೇಖಕರಲ್ಲಿ ಸ್ವಾಮಿಯವರು 'ವಿಶಿಷ್ಟರು' ಎಂದು ಗುರುತಿಸುತ್ತಾರೆ. ಎಲ್ಲರೂ ಒಂದೇ ತೆರನಾಗಿ ಬರೆದರೆ ಅನನ್ಯತೆ ಎಂಬುದನ್ನು ಗುರುತಿಸಲು ಸಾಧ್ಯವಿಲ್ಲ. ಎಲ್ಲ ಲೇಖಕರಲ್ಲೂ ತಮ್ಮದೇ ಆದ ಸ್ವಂತಿಕೆ ಇರುತ್ತದೆ. ಅದು ಸ್ವಾಮಿಯವರಲ್ಲೂ ಇದೆ. ಅದೇ ರೀತಿ ವಕ್ರದೃಷ್ಟಿಕೋನದ ಮೂಲಕ ವ್ಯವಸ್ಥೆಯನ್ನು ಪ್ರಶ್ನಿಸುವುದನ್ನು ಬಹಳಷ್ಟು ಲೇಖಕರಲ್ಲಿ ಕಾಣಬರುತ್ತದೆ. ಅದರ ಪ್ರಮಾಣ ಹೆಚ್ಚು ಕಡಿಮೆ ಇರಬಹುದು. ಸ್ವಾಮಿಯವರಿಗೆ ಹೋಲಿಸಿದರೆ ಇದು ಮೂರ್ತಿರಾಯರಲ್ಲಿ ಕೊಂಚ ಕಡಿಮೆ ಪ್ರಮಾಣದಲ್ಲಿ ಇರಬಹುದು. ಆದರೆ ಬಿ.ಜಿ.ಎಲ್. ಸ್ವಾಮಿಯವರಲ್ಲಿನ ವಕ್ರತೆಯ ದೃಷ್ಟಿಕೋನವು ಮನುಷ್ಯನ ಚಟುವಟಿಕೆಗಳಲ್ಲಿ ಭಿನ್ನವಾಗಿ ಗ್ರಹಿಸಲು ಸಹಾಯಕವಾಗಿದೆ ಎನ್ನುವುದು ನಿಜ. ಹಾಸ್ಯ ವಿಡಂಬನೆಗಳಿಂದ ಸಾಮಾಜಿಕ, ಧಾರ್ಮಿಕ ವ್ಯವಸ್ಥೆಯನ್ನು ಚಿತ್ರಿಸುವುದಕ್ಕೆ ಅವರಿಗೆ ಸಾಧ್ಯವಾಗಿದೆ. ನವ್ಯ ಲೇಖಕರಲ್ಲಿ ಸಹಜವಾಗಿ ಕಾಣುವ ವಿಶಿಷ್ಟವಾದ ವರ್ತನೆಗಳನ್ನು ವಿಚಿತ್ರ ಸನ್ನಿವೇಶಗಳನ್ನು ತರಲು ಅವರಿಗೆ ಸಾಧ್ಯವಾಗಿದೆ.

ಇನ್ನೊಬ್ಬ ಲೇಖಕಿಯಾದ ಸಾರಾ ಅಬೂಬಕ್ಕರ್ ಅವರ 'ಐಷಾರಾಮದ ಆಳದಲ್ಲಿ' ಪ್ರವಾಸ ಕಥನವನ್ನು ಇಂದಿರಾಕುಮಾರಿಯವರು ಪುಸ್ತಕ ವಿಮರ್ಶೆಗೆ ಒಳಪಡಿಸಿದ್ದಾರೆ. ಅವರು ಕೃತಿಯ ಸ್ಥೂಲ ವಿಮರ್ಶೆ ಮಾಡಿದ್ದಾರೆ. ಅವರ ಗ್ರಹಿಕೆಯಂತೆ 'ಐಷಾರಾಮದ ಆಳದಲ್ಲಿ' ಕೃತಿಯು ಹೀಗಿದೆ.

"ಡಾಲರ್ ಗಳಿಕೆಯ ಮಹಾತ್ವಾಕಾಂಕ್ಷೆಯಿಂದ. ತಾಯ್ನಾಡಿಗೆ ವಿದಾಯ ಹೇಳುವ ಪ್ರಪಂಚದ ಪ್ರತಿಭೆಗಳನ್ನು ಧನಬಲದಿಂದ ಆಕರ್ಷಿಸಿ ದುಡಿಸಿ ಪ್ರಪಂಚವನ್ನು ಅಂಕೆಯಲ್ಲಿಟ್ಟುಕೊಳ್ಳ ಬಯಸುವ ಅಮೆರಿಕ ಈಗ ಪ್ರವಾಸಿಗಳ ಮೊದಲ ಆಯ್ಕೆ. ಇತ್ತೀಚಿಗೆ ಇದನ್ನು ಸಂದರ್ಶಿಸಿ ಬಂದ ಲೇಖಕಿ ಶ್ರೀಮತಿ ಸಾರಾ ಅಬೂಬಕ್ಕರ್ ಅದನ್ನು ಚಿನ್ನದ ಹೊನ್ನಿನ ನಾಡೆಂದು ವರ್ಣಿಸುತ್ತ ತಮ್ಮ ಪ್ರವಾಸ ಅನುಭವಗಳನ್ನು, ಅಲ್ಲಿನ ಐಷಾರಾಮದ ಜೀವನವನ್ನು ಸ್ವರ್ಗ ಸಮಾನ ಮಾತ್ರವಲ್ಲ ಸ್ವರ್ಗವೇ ಎಂದು ಬಣ್ಣಿಸಿದ್ದಾರೆ"[೬] (ಹೊಸತು, ಪು. ೪೬).

ಇಂದಿರಾ ಕುಮಾರಿಯವರ ಈ ಪ್ರವಾಸ ಕಥನದ ಬಗೆಗಿನ ಅನಿಸಿಕೆಗಳು ಅವಸರದ ಓದಿನ ಗ್ರಹಿಕೆಯಿಂದ ಬಂದಂತಹುದು. ಆದರೆ ಸಾರಾ ತಮ್ಮ ಪ್ರವಾಸ ಕಥನದಲ್ಲಿ ಅಮೆರಿಕೆಯ ಐಷಾರಾಮದ ಆಳದಲ್ಲಿ ಕೇವಲ ಸುಖವಷ್ಟೆ ಇಲ್ಲ; ದುಃಖವೂ ಇದೆ ಎಂಬುದನ್ನು ಚಿತ್ರಿಸಿದ್ದಾರೆ. ಅಮೆರಿಕಾದಲ್ಲಿಯೂ ವರದಕ್ಷಿಣೆ ಪಿಡುಗಿದೆ. ಕೊಲೆಗಳು ನಡೆಯುತ್ತವೆ. ಅತೃಪ್ತಿ ತಾಂಡವ ವಾಡುತ್ತಿದೆ ಎಂಬುದನ್ನು ಪ್ರವಾಸ ಕಥನದುದ್ದಕ್ಕೂ ಸಾರಾ ಕಾಣಿಸಿದ್ದಾರೆ. ಅದರ ಒಂದು ಭಾಗ ಹೀಗಿದೆ :

"ಅಮೆರಿಕನ್ನರ ಈ ಸುಖ-ಸಂತೋಷಗಳು ಐಷಾರಾಮದ ಬದುಕು ಮೇಲ್ಭಾಗದ ಹರವು ಒಳಪ್ರವಾಹದ ಕಡೆಗೆ ಇಣುಕಿ ನೋಡಿದರೆ, ಅಸಂತೋಷದ, ದುಃಖದ, ಅಸಹನೆಯಿಂದ ಕುದಿಯುವ ಮನಸ್ಸುಗಳು ಹಾಗೂ ಭಾರವಾದ ಹೃದಯಗಳ ನಿಟ್ಟುಸಿರೂ ನಮಗೆ ಅನುಭವವಾಗಬಹುದು. ಮುರಿದ ಮನಸ್ಸುಗಳಿಂದಾಗಿ ಒಡೆದ ಕುಟುಂಬಗಳು ಸಾಕಷ್ಟಿವೆ. ಸಿಂಗಲ್ ಮದರ್ ಸಿಂಗಲ್ ಪೇರೆಂಟ್ ಮುಂತಾದ ವಿಚ್ಛೇದಿತ ಕುಟುಂಬಗಳಿಗೆ ಲೆಕ್ಕವೇ ಇಲ್ಲ" (ಐಷಾರಾಮದ ಆಳದಲ್ಲಿ, ಪು. ೧೩೩).

ಈ ಮೇಲಿನ ವರ್ಣನೆಯು ಅಮೆರಿಕದಲ್ಲಿ ದುಃಖ ಅತೃಪ್ತಿ ಕಷ್ಟಗಳೂ ಇವೆ. ಐಷಾರಾಮಗಳು ಹೆಚ್ಚಾಗಿ ಇರುವುದರಿಂದ ಈ ದುಃಖದ ಮುಖಗಳು ಎದ್ದು ಕಾಣುವುದಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇದನ್ನು ಇಂದಿರಾಕುಮಾರಿಯವರು ಸೂಕ್ಷ್ಮವಾಗಿ ಗ್ರಹಿಸಿದಂತಿಲ್ಲ.

ಒಟ್ಟಾರೆಯಾಗಿ ಮೂರು ಪ್ರವಾಸ ಕಥನಗಳ ಮೇಲೆ ಬಂದಿರುವ ವಿಮರ್ಶೆಗಳು ಮುಖ್ಯವಾಗಿ ಲೇಖಕ ಕೇಂದ್ರಿತವಾದವು ಎಂದು ಮೇಲುನೋಟಕ್ಕೆ ಕಂಡು ಬರುತ್ತವೆ. ಆದರೂ ಈ ಮೂರು ಪ್ರವಾಸ ಕಥನಗಳನ್ನು ಸ್ಥೂಲವಾಗಿ ಗ್ರಹಿಸಲು ಈ ವಿಮರ್ಶೆಗಳು ಸಹಾಯಕಾರಿಯಾದ ಅಂಶಗಳನ್ನು ನೀಡುತ್ತವೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನವು ಪ್ರವಾಸ ಕಥನಗಳ ವಿಸ್ತೃತವಾದ, ವಿಮರ್ಶಾತ್ಮಕವಾದ ಅಧ್ಯಯನವನ್ನು ಮಾಡಲು ಯತ್ನಿಸುತ್ತದೆ.

**ಟಿಪ್ಪಣಿಗಳು**

೧. ಮಲ್ಲೇಪುರಂ ಜಿ. ವೆಂಕಟೇಶ (ಸಂ), **ಪ್ರವಾಸ ಸಾಹಿತ್ಯ : ಒಂದು ಅಧ್ಯಯನ,** ಪು.೫೦

೨. ವಿದ್ಯಾಶಂಕರ್, **ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ,** ಪು.೩೫

೩. ತಾರಾನಾಥ ಎನ್.ಎಸ್., **ಸಹಚರ,** ಪು.೧೦೩

೪. .......ಅದೇ........, ಪು.೧೦೩

೫. ಮಲ್ಲೇಪುರಂ ಜಿ. ವೆಂಕಟೇಶ (ಸಂ), **ಪ್ರವಾಸ ಸಾಹಿತ್ಯ : ಒಂದು ಅಧ್ಯಯನ,** ಪು.೬೩

೬. .......ಅದೇ......, ಪು.೬೦

೭. ಇಂದಿರಾ ಕುಮಾರಿ, **ಹೊಸತು,** ಮಾಸಪತ್ರಿಕೆ, ಪು.೪೫

* * *

ಅಧ್ಯಾಯ ೨

# ಅಮೆರಿಕ ಪ್ರವಾಸ ಕಥನಗಳಲ್ಲಿ ಸಾಂಸ್ಕೃತಿಕ ನೋಟಗಳು

## ೨.೧. ಸಾಮಾಜಿಕ ವ್ಯವಸ್ಥೆಯ ಬಗೆಗಿನ ಪ್ರತಿಕ್ರಿಯೆಗಳು

ನಮ್ಮ ಸಂವೇದನಾಶೀಲ ಲೇಖಕರು ಬರೆದ ಪ್ರವಾಸ ಕಥನಗಳು ಆಯಾ ದೇಶದ ಸಾಂಸ್ಕೃತಿಕ ಸನ್ನಿವೇಶಗಳನ್ನು ಓದುಗರಿಗೆ ತಿಳಿಸುತ್ತದೆ. ಪ್ರಸ್ತುತ ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳೂ ಸಹ ಅಮೆರಿಕೆಯ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ - ಹೀಗೆ ಅನೇಕ ವ್ಯವಸ್ಥೆಗಳನ್ನು ಸಾಂಸ್ಕೃತಿಕ ದೃಷ್ಟಿಕೋನದಲ್ಲಿ ಕಟ್ಟಿಕೊಡುತ್ತವೆ. ಲೇಖಕರು ಸಾಮಾಜಿಕ ವ್ಯವಸ್ಥೆಗಳ ಬಗೆಗೆ ತಮ್ಮ ಕಥನಗಳಲ್ಲಿ ಹೇಗೆ ಪ್ರತಿಕ್ರಿಯಿಸುತ್ತಾರೆ, ಅಮೆರಿಕನ್ ಜನರು ಭಾರತೀಯರಿಗಿಂತ ಹೇಗೆ ಭಿನ್ನ? ಅವರ ಜೀವನ ವಿಧಾನ ಸಾಮಾಜಿಕ ವ್ಯವಸ್ಥೆ ಮುಂತಾದವುಗಳು ಹೇಗೆ ಬೇರೆಯಾಗಿವೆ ಎನ್ನುವ ಪ್ರತಿಕ್ರಿಯೆಗಳನ್ನು ಅವರು ತಮ್ಮ ಪ್ರವಾಸ ಕಥನದಲ್ಲಿ ದಾಖಲಿಸುತ್ತಾರೆ.

ಅಮೆರಿಕ ಕುರಿತ ಈ ಪ್ರವಾಸ ಕಥನಗಳಲ್ಲಿ ಒಂದೇ ವಿಷಯವನ್ನು ಮೂವರೂ ಲೇಖಕರು ಮೂರು ಬಗೆಯಲ್ಲಿ ಚಿತ್ರಿಸುವ ಸನ್ನಿವೇಶಗಳು ಕಂಡು ಬರುತ್ತವೆ. ಶೌಚಾಲಯ ವ್ಯವಸ್ಥೆಯಂತಹ ಸಾಮಾನ್ಯ ಸಂಗತಿಯ ಬಗೆಗೆ ಮೂವರು ಲೇಖಕರು ನೀಡುವ ಪ್ರತಿಕ್ರಿಯೆಗಳನ್ನು ನಿದರ್ಶನಕ್ಕಾಗಿ ನೋಡಬಹುದಾಗಿದೆ.

ಎ.ಎನ್. ಮೂರ್ತಿರಾವ್ ಅವರು 'ಅಪರವಯಸ್ಕನ ಅಮೆರಿಕಯಾತ್ರೆ' ಪ್ರವಾಸ ಕಥನದಲ್ಲಿ ಭಾರತೀಯ ಮತ್ತು ಪಾಶ್ಚಾತ್ಯರಲ್ಲಿ ಬಳಕೆಗೆ ಇರುವ ಶೌಚಾಲಯ ವ್ಯವಸ್ಥೆಯ ಬಗೆಗೆ ಪ್ರತಿಕ್ರಿಯಿಸುತ್ತಾರೆ. ಲೇಖಕರು ಪ್ರವಾಸ ಕಥನದಲ್ಲಿ ಭಾರತೀಯ ಮತ್ತು ಪಾಶ್ಚಾತ್ಯ ಶೌಚಾಲಯ ವ್ಯವಸ್ಥೆಗಳೆರಡನ್ನೂ ಸಹ ಮೆಚ್ಚುತ್ತಾರೆ. ಅವರು ಎರಡೂ ದೇಶಗಳ ಹೋಲಿಕೆ ಮಾಡುವಾಗ ಯಾವುದೇ ತರಹದ 'ತಾರತಮ್ಯ, ಶ್ರೇಷ್ಠ-ಕನಿಷ್ಠಗಳ ಮೌಲ್ಯಮಾಪನ ಮಾಡುವುದಿಲ್ಲ. ಲೇಖಕರು ಅಮೆರಿಕ ಶೌಚಾಲಯ ವ್ಯವಸ್ಥೆಯನ್ನು ಪ್ರತಿಕ್ರಿಯಿಸುವ ಒಂದು ಭಾಗವನ್ನು ಉದಾಹರಣೆಗಾಗಿ ನೋಡಬಹುದಾಗಿದೆ.

"ಈ ಮನೆಯಲ್ಲಿ ನನ್ನ ಗಮನವನ್ನು ಸೆಳೆದ ಭಾಗ ದಿವಾನಖಾನೆಯಲ್ಲ. ಸ್ಟಡಿ ಅಲ್ಲ. ಬಚ್ಚಲು ಮನೆ ಮತ್ತು ಕಕ್ಕಸ. ಅಮೆರಿಕನ್ನರು ಮನೆ ಕಟ್ಟುವಾಗ ಎಲ್ಲಕ್ಕಿಂತ ಹೆಚ್ಚಾಗಿ ಈ ಭಾಗದ ವಿಷಯಗಳಲ್ಲಿ ಜಾಗರೂಕತೆ ವಹಿಸುತ್ತಾರೆ. ಅವರ ಶೌಚಾಗಾರದಲ್ಲಿ ಮೆಚ್ಚುವುದು ಶುಭ್ರತೆಯನ್ನು ಮಾತ್ರ; ಇತರ ವ್ಯವಸ್ಥೆ ನನಗೆ ಒಗ್ಗದು. ಆ ವಿಷಯದಲ್ಲಿ ನಾನು ಭಾರತೀಯನಾಗಿಯೇ ಉಳಿದು ಹಿಂದೂಸ್ತಾನ್ ವ್ಯವಸ್ಥೆಯೇ ಸರಿ ಎನ್ನುವವನು" (ಪು. ೨೦).

ಈ ಸನ್ನಿವೇಶವನ್ನು ಗಮನಿಸಿದಾಗ ಮೂರ್ತಿರಾವ್ ಅವರು ಭಾರತೀಯ ವ್ಯವಸ್ಥೆಯನ್ನು ಹೋಲಿಸಿ ಟೀಕಿಸುವುದಿಲ್ಲ. ಅನಗತ್ಯವಾಗಿ ವಿರೋಧಿಸದೇ ಇರುವುದು ಮೂರ್ತಿರಾವ್ ಅವರ ಉದಾರವಾದಿ ಮನೋಧರ್ಮವನ್ನು ಸೂಚಿಸುತ್ತದೆ. ಪಾಶ್ಚಾತ್ಯರಿಂದ ನಮಗೆ ಬಂದ ಆಧುನಿಕತೆಯನ್ನು ಅವರು ಮುಕ್ತ ಮನಸ್ಕರಾಗಿ ಸ್ವಾಗತಿಸುತ್ತಾರೆ. ಅವರು ಆಧುನಿಕತೆಯ ಆರಾಧಕರೆಂಬಂತೆ ಕಂಡುಬರುತ್ತಾರೆ. ಆದರೆ ಭಾರತದ ಬಗೆಗೆ 'ಹಿಂದೂಸ್ತಾನ್ ವ್ಯವಸ್ಥೆಯೇ ಸರಿ' ಎಂದು ಹೇಳುವುದು ಮಾತ್ರ ಸ್ವದೇಶದ ಬಗೆಗಿನ ಒಂದು ಬಗೆಯ ಅಭಿಮಾನವನ್ನು ತಿಳಿಸುತ್ತದೆ.

ಬಿ.ಜಿ.ಎಲ್. ಸ್ವಾಮಿಯವರು ಶೌಚಾಲಯ ವ್ಯವಸ್ಥೆಯನ್ನು ಕುರಿತು ಪ್ರತಿಕ್ರಿಯಿಸುವಾಗ ಮೂರ್ತಿರಾವ್ ಅವರಿಗಿಂತ ಭಿನ್ನರಾಗಿ ಕಂಡುಬರುತ್ತಾರೆ. ಸ್ವಾಮಿಯವರು ಎರಡೂ ದೇಶಗಳ ವ್ಯವಸ್ಥೆಗಳನ್ನು ವ್ಯಂಗ್ಯ, ವಿಡಂಬನೆ, ಹಾಸ್ಯಗಳಿಂದ ಟೀಕಿಸುತ್ತಾರೆ. ಹಡಗು ಪ್ರಯಾಣ ಮಾಡುತ್ತಿರುವ ಸ್ವಾಮಿಯವರು ಹಡಗಿನಲ್ಲಿನ ಶೌಚಾಲಯ ವ್ಯವಸ್ಥೆಯ ಚಿತ್ರಣವನ್ನು ಪ್ರವಾಸ ಕಥನದಲ್ಲಿ ನೀಡುತ್ತಾರೆ. ಅಂತಹ ಒಂದು ಸಂದರ್ಭ ಇಂತಿದೆ.

'ಎದುರು ಬದುರಾಗಿ ಕೂತು ಒಬ್ಬರ ಮುಖವನ್ನು ನೋಡಿಕೊಂಡು ಯಾವ ಬಗೆಯ ಮರೆಯೂ ಇಲ್ಲದೆ, ಮಾನಮರ್ಯಾದೆಗಳನ್ನು ಬಿಟ್ಟು ಕುಳಿತುಕೊಳ್ಳುವುದು ಹೇಗೆ? ಒಂದು ವೇಳೆ ಯಾರೂ ಇಲ್ಲದಿರುವಾಗ ಒಂದು ನಮ್ಮ ನಮ್ಮ ಕೆಲಸವನ್ನು ಮುಗಿಸಿಕೊಳ್ಳೋಣವೆಂದರೆ, ಈ ತೆರನಾದ ಕಮೋಡ್. ಕಕ್ಕಸುಗಳ ಮೇಲೆ ಕುಳಿತುಕೊಳ್ಳುವುದಾದರೂ ಹೇಗೆ? ನಮಗೆ ಹುಟ್ಟಿದಾರಭ್ಯ ಕುಕ್ಕರಗಾಲಲ್ಲಿ ಕೂತು ಅಭ್ಯಾಸವಾಗಿ ಬಿಟ್ಟಿದೆಯಲ್ಲ? ಈಗ ಇದರ ಮೇಲೆಯೂ ಕುಕ್ಕರಗಾಲಲ್ಲಿಯೇ ಕುಳಿತುಕೊಳ್ಳಬೇಕೆ? ಅಥವಾ ಅದರ ಮೇಲೆ ಕುಳಿತುಕೊಳ್ಳುವ ರೀತಿಯಲ್ಲಿಯೇ ಕುಳಿತುಕೊಂಡರೆ ವಿಸರ್ಜನೆ ಸಮರ್ಪಕವಾಗಿ ನಡೆಯುತ್ತದೆಯೆ? (ಪು. ೫).

ಹೀಗೆ ಅನೇಕ ಪ್ರಶ್ನೆಗಳನ್ನು ಹಾಕಿಕೊಳ್ಳುವುದರ ಮೂಲಕ ಹಡಗಿನಲ್ಲಿರುವ ಶೌಚಾಲಯ ವ್ಯವಸ್ಥೆಯನ್ನು ತಮಾಶೆಯಿಂದ ಚಿತ್ರಿಸುತ್ತಾರೆ. ಮೇಲಿನ ಸನ್ನಿವೇಶದಿಂದ ಪಾಶ್ಚಾತ್ಯರು ನಗ್ನತೆಯ ಬಗೆಗೆ ಮುಜುಗರ ಪಡದವರು ಎಂಬುದು ಮನವರಿಕೆಯಾಗುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ಪ್ರತಿಭಟನೆಗಳು ನಡೆಸುವಾಗ ಸಾಮೂಹಿಕವಾಗಿ ನಗ್ನರಾಗಿ ಪ್ರತಿಭಟಿಸುವುದನ್ನು ಅನೇಕ ಸುದ್ದಿ ಮಾಧ್ಯಮಗಳಿಂದ ತಿಳಿಯುತ್ತೇವೆ. ಪಾಶ್ಚಾತ್ಯರಲ್ಲಿ ಸಾರ್ವಜನಿಕ ಸ್ಥಳಗಳಲ್ಲಿ ನಗ್ನತೆ ಪ್ರದರ್ಶನ ಎಂಬುದು ಬಹಳ ದೊಡ್ಡ ವಿಷಯವಲ್ಲ. ಆದರೆ ಭಾರತೀಯರಿಗೆ ಅದು ಮುಖ್ಯವಾದದ್ದಾಗಿದೆ. ಪಾಶ್ಚಾತ್ಯರು ಶೌಚ ಮಾಡುವಾಗ ಒಬ್ಬರ ಮುಖ ಒಬ್ಬರು ನೋಡಿಕೊಂಡು, ಎದುರು ಬದುರು ಕುಳಿತುಕೊಂಡರೂ ಅವರಿಗೆ ಮುಜುಗರ ವಾಗುವುದಿಲ್ಲ. ಸ್ವಾಮಿಯವರು, ಪ್ರವಾಸ ಕಥನದಲ್ಲಿ ಭಾರತೀಯರಿಗೆ ಇಂತಹ ಸನ್ನಿವೇಶಗಳು ಒಗ್ಗುವುದಿಲ್ಲ ಎಂದು ಹೇಳುತ್ತಾರೆ. ಆದರೆ ಬಹುಪಾಲು ಹಳ್ಳಿಗಳಲ್ಲಿ ಬಯಲುಸೀಮೆಯ ಪ್ರದೇಶಗಳಲ್ಲಿ ಜನಸಾಮಾನ್ಯರು ಸಾರ್ವಜನಿಕ ಸ್ಥಳಗಳಾದ ಬಸ್‌ನಿಲ್ದಾಣ, ರಸ್ತೆ ಪಕ್ಕದಲ್ಲಿ ತಮ್ಮ ದೇಹಬಾಧೆಯನ್ನು ನಿರ್ಲಜ್ಜೆಯಿಂದ

ತೀರಿಸಿಕೊಳ್ಳುವುದನ್ನು ನಗರ ಪ್ರದೇಶದಿಂದ ಬಂದ ಸ್ವಾಮಿಯವರು ಗಮನಿಸಿದಂತೆ ಇಲ್ಲ. ನಗರದ ಮಧ್ಯಮ ವರ್ಗದ ಜೀವನ ವಿಧಾನದ ನೆಲೆಯಲ್ಲಿ ಸ್ವಾಮಿಯವರ ಆಲೋಚನೆ ಹರಿದಂತೆ ಕಂಡುಬರುತ್ತದೆ.

ಭಾರತೀಯರ ಮನಃಸ್ಥಿತಿ ಶೌಚಾಲಯ ವ್ಯವಸ್ಥೆ ಬಗೆಗೆ ಎಂತಹ ಮನೋಭಾವನೆಯನ್ನು ತಾಳಿದೆ ಎಂಬುದನ್ನು ಸ್ವಾಮಿಯವರು ತಮ್ಮ ಅಜ್ಜಿಯ ಉದಾಹರಣೆಯ ಮೂಲಕ ಪ್ರವಾಸ ಕಥನದಲ್ಲಿ ಚಿತ್ರಿಸುತ್ತಾರೆ. ಒಮ್ಮೆ ಲೇಖಕರು ತಮ್ಮ ಅಜ್ಜಿಯನ್ನು ರೈಲ್ವೆಯಲ್ಲಿರುವ ಶೌಚಾಲಯ ವ್ಯವಸ್ಥೆಯನ್ನು ತೋರಿಸುತ್ತಾರೆ. ಆಗ ಅವರ ಅಜ್ಜಿ "ಒಂದು ಕೈಲಿ ಮೂಗು, ಒಂದು ಕೈಲಿ ಕಣ್ಣು ಮುಚ್ಚಿಕೊಂಡು, ರಾಮರಾಮ, ರಾಮರಾಮ ನನ್ನ ಆಚಾರಕ್ಕೂ ಈ ಅನಾಚಾರಕ್ಕೂ.... ರಾಮರಾಮ. ಬಾಯಿ ಮುಖ ತೊಳೆಯುವ ಭಾಗವೂ ಒಂದೇ ಕಡೆ, ಕಕ್ಕಸಿಗೆ ಹೋಗುವ ಜಾಗವೂ ಒಂದೇ ಕಡೆ, ರಾಮರಾಮ, ರಾಮರಾಮ ಎಂದು ಹಂಬಲಿಸಿ ತಕ್ಷಣವೇ ಕಂಪಾರ್ಟಮೆಂಟಿನಿಂದ ಹೊರಕ್ಕೆ ಧುಮುಕಿ ಬಿಟ್ಟಳು" (ಪು. ೧೩).

ಈ ಸಂದರ್ಭವನ್ನು ಗಮನಿಸಿದಾಗ ಪಾಶ್ಚಾತ್ಯ ತಂತ್ರಜ್ಞಾನದಿಂದ ಬಂದ ಸಾರ್ವಜನಿಕ ವಾಹನಗಳು, ಒಂದ ಹೊಸತರಲ್ಲಿ ಭಾರತದಂತಹ ಸಂಪ್ರದಾಯಶೀಲ ದೇಶಗಳಲ್ಲಿ ಎಂಥ ಸಂಘರ್ಷವನ್ನು ಎದುರಿಸಿದವು ಎಂಬುದು ಮನವರಿಕೆಯಾಗುತ್ತದೆ.

ಸಾರಾ ಅಬೂಬಕ್ಕರ್ ಅವರು ಮೂರ್ತಿರಾವ್ ಮತ್ತು ಸ್ವಾಮಿಯವರಿಗಿಂತಲೂ ಭಿನ್ನರಾಗಿ ಶೌಚಾಲಯ ವ್ಯವಸ್ಥೆಯ ಬಗೆಗೆ ಚಿತ್ರಿಸುತ್ತಾರೆ. ಬಂಡಾಯ ಲೇಖಕಿಯಾದ ಸಾರಾ ತಮಗೆ ಮೆಚ್ಚುಗೆಯಾದ ವ್ಯವಸ್ಥೆಯನ್ನು ಹೊಗಳುತ್ತಾರೆ. ಇಷ್ಟವಾಗದ ವ್ಯವಸ್ಥೆಯನ್ನು ಟೀಕಿಸುವ ಮೂಲಕ ವಿರೋಧವನ್ನು ವ್ಯಕ್ತಪಡಿಸುತ್ತಾರೆ. ಅಮೆರಿಕನ್ ಶೌಚಾಲಯ ವ್ಯವಸ್ಥೆಯನ್ನು ಮೆಚ್ಚುವ ಸಾರಾ ಕೆಲವು ನೆನಪುಗಳನ್ನು ಕೃತಿಯಲ್ಲಿ ತರುತ್ತಾರೆ ಅವರ ಒಂದು ನೆನಪು ಹೀಗಿದೆ:

"ಇಲ್ಲಿನ ಹೊಟೇಲುಗಳಲ್ಲಿ ರೆಸ್ಟ್‌ರೂಂ ಎಂದು ಕರೆಯುವ ಟಾಯ್ಲೆಟ್‌ಗಳು ಇರಲೇಬೇಕು. ಎಂತಹ ಚಿಕ್ಕ ಹೊಟೇಲುಗಳಾದರೂ ಸರಿಯೇ ಅವುಗಳ ಸ್ವಚ್ಛತೆಯನ್ನು ಅಷ್ಟೇ ಚೆನ್ನಾಗಿ ಕಾಪಾಡಿ ಕೊಳ್ಳಲಾಗುತ್ತದೆ. ನಮ್ಮೂರಿನಲ್ಲಿ ಬೆಂಗಳೂರಿಗೆ ಹೋಗುವಾಗಲೂ ಬೆಳ್ಳೂರ್ ಕ್ರಾಸ್‌ನಲ್ಲಿ ಹೊಟೇಲ್‌ಗಳಲ್ಲಿ ಟಾಯ್ಲೆಟ್‌ಗಳಿರುತ್ತವೆ. ಆದರೆ ಅದರೊಳಗೆ ಮೂಗು ಮುಚ್ಚಿಕೊಂಡೇ ಹೋಗಬೇಕಾದುದು ಮತ್ತು ಒಬ್ಬರಿಗೆ ಒಂದು ರೂಪಾಯಿ ತೆರಬೇಕಾದುದು ನನಗೆ ಜ್ಞಾಪಕವಾಯಿತು" (ಪು. ೮೬).

ಅಮೆರಿಕನ್ ಜೀವನ ಶೈಲಿ ಹೆಚ್ಚು ಸ್ವಚ್ಛತೆಯನ್ನು ಬಯಸುವಂತಹದು. ಅದಕ್ಕೆ ಅಲ್ಲಿನ ಸಿರಿವಂತಿಕೆ ಹಾಗೂ ವಾತಾವರಣವೂ ಕಾರಣ. ಅದಲ್ಲದೆ ಅಮೆರಿಕದಲ್ಲಿ ಜನಸಂಖ್ಯೆಯೂ ಕೂಡ ಭಾರತಕ್ಕೆ ಹೋಲಿಸಿದರೆ ಕಡಿಮೆ. ಆದರೆ ಭಾರತದ ಸನ್ನಿವೇಶವೇ ಬೇರೆ. ನಮ್ಮ ಬಯಲುಸೀಮೆಯ ಪ್ರದೇಶಗಳಲ್ಲಿ ಧೂಳು ತುಂಬಿರುತ್ತದೆ. ಶೌಚಾಲಯ ಬಳಕೆ ಮಾಡುವವರ ಜನಸಂಖ್ಯೆಯೂ ಹೆಚ್ಚಾಗಿದೆ. ಹೀಗಾಗಿ ಭಾರತದಲ್ಲಿ ಸ್ವಚ್ಛತೆಯು ಅಮೆರಿಕಕ್ಕಿಂತ ಕಡಿಮೆ. ಇದನ್ನು ಮನೋಧರ್ಮದ ಸಮಸ್ಯೆ ಎಂದು ಗ್ರಹಿಸುವ ಲೇಖಕಿ ಶುಲ್ಕ ವಿಧಿಸಿದರೂ ಸಹ ಸ್ವಚ್ಛತೆ ಕಾಪಾಡದಿರುವುದನ್ನು ವಿರೋಧಿಸುತ್ತಾರೆ.

ಸಾಂಸ್ಕೃತಿಕ ಚರ್ಚೆಯಲ್ಲಿ ಸಾಮಾಜಿಕ ವ್ಯವಸ್ಥೆ ಹಾಗೂ ಅದರೊಳಗಿನ ಜೀವನ ಕ್ರಮವೂ ಒಂದು. ಅದರಲ್ಲಿ ಶೌಚಾಲಯ ವ್ಯವಸ್ಥೆಯಂತಹ ಸಣ್ಣ ಸಂಗತಿಯ ಬಗೆಗೆ ಚರ್ಚಿಸುವ ಮೂವರು ಲೇಖಕರು ಅಮೆರಿಕಾದ ಜನರ ಮನೋಧರ್ಮಕ್ಕೂ ಭಾರತೀಯರ ಮನೋಧರ್ಮಕ್ಕೂ ಇರುವ ಭಿನ್ನತೆಯನ್ನು ತಮ್ಮ ಅಭಿಪ್ರಾಯಗಳೊಂದಿಗೆ ಚಿತ್ರಿಸುತ್ತಾರೆ. ಭಾರತೀಯ ಮತ್ತು ಪಾಶ್ಚಾತ್ಯ ಜೀವನ ಕ್ರಮಗಳ ಬಗ್ಗೆ ಪ್ರೀತಿ, ಟೀಕೆ, ವಿರೋಧ - ಹೀಗೆ ಬಹುರೂಪಿಯಾದ ಪ್ರತಿಕ್ರಿಯೆಗಳನ್ನು ತಮ್ಮ ಕಥನಗಳಲ್ಲಿ ದಾಖಲಿಸುತ್ತಾರೆ. ಭಾರತೀಯ ಮತ್ತು ಅಮೆರಿಕನ್ ಜನರ ಜೀವನ ವಿಧಾನಗಳು ಸಣ್ಣಪುಟ್ಟ ದೈನಂದಿನ ಜೀವನದ ವಿವರಗಳಲ್ಲಿ ಸಹ ಬೇರೆಯಾಗಿರುವುದನ್ನು ಗುರುತಿಸುವ ಪ್ರಯತ್ನ ಮಾಡುತ್ತಾರೆ. ಎರಡೂ ದೇಶಗಳ ಸಾಂಸ್ಕೃತಿಕ ಬದುಕಿಗೆ ಸಂಬಂಧಿಸಿದಂತೆ ಎರಡೂ ಸಾಮಾಜಿಕ ವ್ಯವಸ್ಥೆಯಲ್ಲಿನ ಅನೇಕ ಸಂಗತಿಗಳನ್ನು ಚರ್ಚಿಸುತ್ತಾರೆ. ಅಂತರ್‌ಜಾತಿ ವಿವಾಹ, ಉಡುಗೆ-ತೊಡುಗೆ, ಸಾಮಾಜಿಕ ನಂಬಿಕೆಗಳ ವ್ಯತ್ಯಾಸಗಳನ್ನು ಈ ಲೇಖಕರು ಚಿತ್ರಿಸುತ್ತಾರೆ.

ಮೂರ್ತಿರಾವ್ ಅವರು ಪ್ರವಾಸ ಕಥನದಲ್ಲಿ ಭಾರತೀಯ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳ ತುಲನೆಯನ್ನು ಮಾಡುತ್ತಾರೆ. 'ಹಿನ್ನೆಲೆ : ರಾಜು ನ್ಯಾನ್ಸಿಯರ ಮದುವೆ' ಎಂಬ ಅಧ್ಯಾಯದಲ್ಲಿ ಲೇಖಕರು ಅಂತರ್‌ಜಾತಿ ವಿವಾಹದ ಬಗೆಗೆ ಮಾಡುವ ಚಿಂತನೆಯನ್ನು ಗಮನಿಸಬಹುದು. ಭಾರತೀಯ ಮತ್ತು ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಅಂತರ್‌ಜಾತಿ ವಿವಾಹದ ಬಗೆಗೆ ಇರುವ ಅಭಿಪ್ರಾಯಗಳನ್ನು ಅವರು ಪ್ರವಾಸ ಕಥನದಲ್ಲಿ ಕಾಣಿಸುತ್ತಾರೆ. ಸಾಮಾನ್ಯವಾಗಿ ಅಂತರ್‌ಜಾತಿ ವಿವಾಹಕ್ಕೆ ಭಾರತೀಯರಲ್ಲಿ ವಿರೋಧವಿದೆ. ಅದರಂತೆ ಪಾಶ್ಚಾತ್ಯರಲ್ಲೂ ಸಹ ಅಂತರ್‌ಧರ್ಮೀಯ ವಿವಾಹದ ಬಗೆಗೆ ವಿರೋಧವಿದೆ ಎಂಬುದನ್ನು ಲೇಖಕರು ಹೇಳುತ್ತಾರೆ. ರಾಜು ನ್ಯಾನ್ಸಿಯರ ಮದುವೆಗೆ ಆರಂಭದಲ್ಲಿ ನ್ಯಾನ್ಸಿಯ ತಂದೆ ತಾಯಿಗಳಾದ ಮೆಕ್‌ಮಿಲನ್ ದಂಪತಿಗಳು ವಿರೋಧಿಸುತ್ತಾರೆ. ಅದನ್ನು ಮೂರ್ತಿರಾವ್ ಅವರು ಅಂತರ್‌ಧರ್ಮೀಯ ವಿರೋಧ ಎಂದು ಗುರುತಿಸುತ್ತಾರೆ. ವೃತ್ತಿಯಿಂದ ಇಂಗ್ಲಿಷ್ ಅಧ್ಯಾಪಕರಾದ ಮೂರ್ತಿರಾವ್ ಅವರು ಇಂಗ್ಲಿಷ್ ಸಾಹಿತ್ಯದಲ್ಲೂ ಸಹ ಅಂತರ್‌ಜಾತಿ ವಿವಾಹದ ಬಗೆಗೆ ವಿರೋಧವಿರುವ ಸಂದರ್ಭಗಳನ್ನು ಓದಿನ ಗ್ರಹಿಕೆಯಿಂದ ಪ್ರವಾಸಿ ಕಥನದಲ್ಲಿ ಉಲ್ಲೇಖಿಸುತ್ತಾರೆ:

"ಐರೋಪ್ಯರು ಇತರ ಜನಾಂಗದ ಮಹಿಳೆಯನ್ನು ಮದುವೆಯಾದರೆ ಅದನ್ನು ಪ್ರಸ್ತಾಪಿಸುವ ಸಂದರ್ಭದಲ್ಲಿ ಕೆಲವು ಲೇಖಕರು "He has gone Native" ಎಂಬ ತಿರಸ್ಕಾರದ ಮಾತನ್ನು ಬರೆಯುವುದುಂಟು. ನಮ್ಮಲ್ಲಿಯೂ ಬೇರೆ ಜನಾಂಗದವರನ್ನು ಮದುವೆಯಾದವರಿಗೆ ಹೀಗೆ ತಿರಸ್ಕಾರ ಸಲ್ಲುತ್ತದೆ. ಮದುವೆಯಾಗುವುದಂತಿರಲಿ ವಿಲಾಯಿತಿಗೆ ಹೋಗಿ ಬಂದವರನ್ನೂ ಕೂಡ ಸವ್ಯವಹಾರಕ್ಕೆ ಸೇರಿಸಬಾರದು ಎಂಬ ಭಾವನೆ ಒಂದು ಕಾಲದಲ್ಲಿ ತೀವ್ರವಾಗಿತ್ತೆಂಬುದನ್ನು ಬಲ್ಲೆ" (ಪು. ೪೦).

ಭಾರತದಲ್ಲಿ ಒಂದು ಕಾಲದಲ್ಲಿ ಅಂತರ್‌ಜಾತಿ ವಿವಾಹಗಳಿಗೆ ಪ್ರೋತ್ಸಾಹ ನೀಡಿದವರೂ ಸಹ ಬಹಿಷ್ಕಾರಕ್ಕೆ ಒಳಪಡಬೇಕಾದ ಸಂದರ್ಭಗಳಿದ್ದವು. ಆದರೆ ಈಗ ಅಂತಹ ಸ್ಥಿತಿ ಇಲ್ಲ ಎಂದು ಲೇಖಕರು ತಮ್ಮ ಹಿಂದಿನ ದಿನಮಾನಗಳನ್ನು ನೆನಪಿಸಿಕೊಳ್ಳುತ್ತಾರೆ. ಲೇಖಕರ ಈ ನೆನಪುಗಳನ್ನು ಗಮನಿಸಿದಾಗ

ಸಂಪ್ರದಾಯಗಳು ಎಷ್ಟು ಬಿಗಿಹಿಡಿತದಿಂದ ಗಟ್ಟಿಯಾಗಿದ್ದವೆಂದೂ ಆದರೆ ಕಾಲಮಾನದ ಬದಲಾವಣೆಗೆ ತಕ್ಕಂತೆ ಅವು ಬದಲಾದವೆಂದು ತಿಳಿದುಬರುತ್ತದೆ. ರಾಜು ನ್ಯಾನ್ಸಿಯರ ಮದುವೆಯ ವಿಚಾರದಲ್ಲಿ ಲೇಖಕರು ವಿರೋಧ ವ್ಯಕ್ತಪಡಿಸದೆ ಮಗನಿಗೆ ಆಶೀರ್ವದಿಸುವುದು ಆಧುನಿಕ ಕಾಲಮಾನದ ಉದಾರತೆಗೆ ಸಾಕ್ಷಿಯಾಗಿದೆ.

ಇನ್ನೊಬ್ಬ ಲೇಖಕರಾದ, ಬಿ.ಜಿ.ಎಲ್. ಸ್ವಾಮಿಯವರು ಸಹ ಎರಡೂ ದೇಶಗಳ ಸಂಸ್ಕೃತಿಯಲ್ಲಿ ಬರುವ ಕೆಲವು ಅಂಶಗಳ ಬಗೆಗೆ ತಮ್ಮ ಪ್ರವಾಸ ಕಥನದಲ್ಲಿ ಟಿಪ್ಪಣಿ ಮಾಡುತ್ತಾರೆ. ಅಮೆರಿಕನ್ ಮತ್ತು ಭಾರತೀಯ ಸಂಸ್ಕೃತಿಯಲ್ಲಿ ತಲೆತೊಡುಗೆಯ ಬಗೆಗೆ ಇರುವ ನಂಬಿಕೆ ಆಚಾರಗಳನ್ನು ಲೇಖಕರು ಚಿತ್ರಿಸುತ್ತಾರೆ. ಹಾಗೆ ಚಿತ್ರಿಸುವಾಗ ಅವರು ಎರಡೂ ಸಂಸ್ಕೃತಿಗಳಲ್ಲಿ ಮೇಲುಕೀಳುಗಳೆಂದು ವಿಂಗಡಿಸದೇ ಅಲ್ಲಿರುವ ವ್ಯವಸ್ಥೆಗಳಲ್ಲಿನ ಭಿನ್ನತೆಯನ್ನು ಮಾತ್ರ ದಾಖಲಿಸುತ್ತಾರೆ. ಅಮೆರಿಕನ್ನರನ್ನು "ನಮ್ಮಂತೆ ಅವರು ಅವರಂತೆ ನಾವುಗಳು" ಎಂದು ನಂಬಿರುವ ಸ್ವಾಮಿಯವರು, ಆಚರಣಾ ಪದ್ಧತಿಗಳಲ್ಲಿ ವ್ಯತ್ಯಾಸಗಳಿರಬಹುದು. ಆದರೆ ಆಚರಣೆಗಳು ಸಾರದಲ್ಲಿ ಒಂದೇ ಆಗಿವೆ ಎಂಬುದನ್ನು ಅನೇಕ ಉದಾಹರಣೆಗಳ ಮೂಲಕ ಸೂಚಿಸುತ್ತಾರೆ. ಈ ಹಿನ್ನೆಲೆಯಿಂದ 'ನನ್ನ ಟೋಪಿ' ಎಂಬ ಅಧ್ಯಾಯದ ಒಂದು ಸನ್ನಿವೇಶ ಸ್ವಾರಸ್ಯಕರವಾಗಿದೆ :

"ನಮ್ಮಲ್ಲಿ ಗುಡಿಗೆ ಹೋದೊಡನೆ ತಲೆಯ ಮೇಲಿನ ತೊಡುಗೆಯನ್ನು ತೆಗೆಯುವ ಪದ್ಧತಿ ಕೆಲವರಲ್ಲುಂಟು. ಅಮೆರಿಕನ್ನರು ಚರ್ಚಿಗೆ ಹೋದಾಗ ಗಂಡಸರು ಮಾತ್ರ ತೆಗೆಯುತ್ತಾರೆ. ಆದರೆ ಹೆಂಗಸರು ಹ್ಯಾಟು ಧರಿಸದೆ ಚರ್ಚಿಗೆ ಹೋಗಿ ಪ್ರಾರ್ಥನೆಯಲ್ಲಿ ಭಾಗವಹಿಸುವುದು ಅವಮರ್ಯಾದೆ. ನಮ್ಮಲ್ಲಿ ಹಿರಿಯರನ್ನು ಕಾಣಲು ಹೋದಾಗ ಬೀದಿಯಲ್ಲೆಲ್ಲ ಬರಿತಲೆಯಲ್ಲಿ ಓಡಾಡಿದರೂ ಅವರೆದುರಿಗೆ ಹೋಗುವ ಮುನ್ನ ಕಿಸೆಯಲ್ಲಿ ಸಿಕ್ಕಿಸಿಕೊಂಡಿರುವ ಟೋಪಿಯನ್ನು ಧರಿಸಿಕೊಂಡು ನಮ್ರತೆಯಿಂದ ನಮಸ್ಕರಿಸಬೇಕು. ಇದು ನಮ್ಮ ಸಂಪ್ರದಾಯಕ್ಕನುಗುಣವಾದ ಮರ್ಯಾದೆ. ಅವರಲ್ಲಿ ಧರಿಸಿಕೊಂಡಿದ್ದ ಹ್ಯಾಟನ್ನು ದೊಡ್ಡವರ ಸನ್ನಿಧಾನದಲ್ಲಿ ತಲೆಯ ಮೇಲಿಂದ ತೆಗೆದು ಬಗ್ಗಿ ವಂದಿಸಬೇಕು; ಇದು ಅವರ ಸಂಪ್ರದಾಯಕ್ಕನುಗುಣವಾದ ಮರ್ಯಾದೆ. ಮನೆ ಕಟ್ಟಡ ಮೊದಲಾದವುಗಳ ಒಳಕ್ಕೆ ಹೋದಾಗ ನಮ್ಮಲ್ಲಿ ತಲೆ ತೊಡುಗೆಯನ್ನೇನೂ ತೆಗೆಯಬೇಕಾಗಿಲ್ಲ. ಆದರೆ ಅವರಲ್ಲಿ ಈ ನಡತೆ ತುಂಬ ಅಪೇಕ್ಷಣೀಯ; ಮನೆಯೊಳಕ್ಕೆ ಪ್ರವೇಶಿಸಿದಾಗ ಹ್ಯಾಟನ್ನು ತೆಗೆಯುವುದು ನಾಗರಿಕ ಲಕ್ಷಣ" (ಪು. ೧೫).

ಭಾರತೀಯ ಸಂಪ್ರದಾಯದಲ್ಲಿ ತಲೆ ತೊಡುಗೆ ಬಳಸುವ ವಿಧಾನಕ್ಕೂ, ಅಮೆರಿಕನ್ ಸಂಸ್ಕೃತಿಯಲ್ಲಿ ತಲೆ ತೊಡುಗೆ ಬಳಕೆ ಮಾಡುವ ಕ್ರಮಕ್ಕೂ ವ್ಯತ್ಯಾಸಗಳಿರುವ ಬಗ್ಗೆ ಲೇಖಕರು ಹೇಳುತ್ತಾರೆ. ಅವರು ಅಮೆರಿಕದ ಸಂಪ್ರದಾಯದ ಬಗ್ಗೆ ವ್ಯಂಗ್ಯವನ್ನು ಮಾಡುವಂತೆ ಕಾಣುತ್ತದೆ. ಆದರೂ ಅದು ತಿರಸ್ಕಾರವಲ್ಲ. ಅದು ಭಿನ್ನತೆಯನ್ನು ಸಹಿಸುವ ಸಮಾನ ಮನಸ್ಕತೆಯಿಂದ ನೋಡುವ ಗುಣವಾಗಿದೆ.

ಸಾರಾ ಅಬೂಬಕ್ಕರ್ ಅವರೂ ಸಹ ಭಾರತ ಹಾಗೂ ಅಮೆರಿಕದ ಸಂಸ್ಕೃತಿಗಳಲ್ಲಿ ಇರುವ ವ್ಯತ್ಯಾಸಗಳನ್ನು ಹೇಳುತ್ತಾರೆ. ಅಮೆರಿಕದ ಕೌಟುಂಬಿಕ ಬದುಕಿನ ಬಗೆಗಿರುವ ಭಾರತೀಯರ ಕಲ್ಪನೆಗಳು, ಕಲ್ಪನೆಗೆ ಸರಿಸಾಟಿ ಇಲ್ಲದೆ ಅಮೆರಿಕನ್ ಕೌಟುಂಬಿಕ ವ್ಯವಸ್ಥೆ ಇವುಗಳ ಕುರಿತು ಅವರು ಪ್ರತಿಕ್ರಿಯಿಸಿದ್ದಾರೆ. ಅಂತಹ ಒಂದು ಪ್ರತಿಕ್ರಿಯೆ ಹೀಗಿದೆ :

"ಅಮೆರಿಕದಲ್ಲಿ ಕೌಟುಂಬಿಕ ಬದುಕು ಸುಖಕರವಾಗಿಲ್ಲ. ಯುವಜನರಲ್ಲಿ ನೈತಿಕತೆ ಇಲ್ಲ; ಮಕ್ಕಳು ಹದಿನಾರು ವರ್ಷ ಪ್ರಾಯವಾದೊಡನೆ ಮನೆಯಿಂದ ಹೊರನಡೆದು ಸ್ವತಂತ್ರರಾಗುತ್ತಾರೆ ಮುಂತಾದ ಕಲ್ಪನೆಗಳು ನಮ್ಮಲ್ಲಿವೆ. ಆದರೆ ಇದು ಪೂರ್ತಿ ಸತ್ಯವಲ್ಲ. ಮಕ್ಕಳ ಕಾಲೇಜು ಶಿಕ್ಷಣಕ್ಕಾಗಿ ಮಕ್ಕಳ ಹುಟ್ಟಿನಿಂದಲೇ ನಿಧಿ ಕೂಡಿಡುವ ಹೆತ್ತವರಿದ್ದಾರೆ. ಬಾಳಸಂಗಾತಿಯ ಆಯ್ಕೆ ಮಾತ್ರ ಅವರವರದ್ದೆ. ಹಿರಿಯರು ಹೆತ್ತವರು ಏರ್ಪಡಿಸುವ ಮದುವೆ ಎಂಬುದಿಲ್ಲ. ಮದುವೆಯಾದ ಬಳಿಕ ತಂದೆ ತಾಯಿಗಳೊಡನೆ ಒಂದೇ ಮನೆಯಲ್ಲಿರುವುದೂ ಇಲ್ಲ ಹಾಗೂ ಮಕ್ಕಳ ವೈವಾಹಿಕ ಬದುಕಿನಲ್ಲಿ ಹೆತ್ತವರು ಮೂಗು ತೂರಿಸುವುದೂ ಕಮ್ಮಿ. ಆದರೆ ಮಗ ಸೊಸೆ ಮತ್ತು ಮೊಮ್ಮಕ್ಕಳು ರಜಾದಿನಗಳನ್ನು ಹೆತ್ತವರೊಡನೆ ಕಳೆಯುವ ವಾಡಿಕೆ ಇದೆ" (ಪು. ೧೬೦).

ಸಾರಾ ಅಬೂಬಕ್ಕರ್ ಅವರು ಮೂರ್ತಿರಾವ್ ಮತ್ತು ಸ್ವಾಮಿಯವರಂತೆ ಭಾರತದ ಮತ್ತು ಅಮೆರಿಕೆಯ ಸಂಸ್ಕೃತಿಗಳನ್ನು ಹೋಲಿಕೆ ಮಾಡಿ ಅವುಗಳಲ್ಲಿನ ವ್ಯತ್ಯಾಸವನ್ನು ಗುರುತಿಸುವುದಿಲ್ಲ. ಬದಲಾಗಿ ಅಲ್ಲಿನ ಸನ್ನಿವೇಶಗಳನ್ನು, ಸಾಮಾಜಿಕ ಬದುಕನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ. ಭಾರತೀಯರು ಅಮೆರಿಕನ್ನರ ಬಗೆಗೆ ಇಟ್ಟುಕೊಂಡಿರುವ ಕಲ್ಪನೆಗಳು ಶುದ್ಧ ಸುಳ್ಳಾಗಿವೆ. ಅವರೂ ಸಹ ನಮ್ಮಂತೆ ಕೌಟುಂಬಿಕ ಪ್ರೀತಿ ವಾತ್ಸಲ್ಯವನ್ನು ತೋರಿಸುವವರಾಗಿದ್ದಾರೆ ಎಂದು ಲೇಖಕಿ ತಿಳಿಸುತ್ತಾರೆ. ವೈವಾಹಿಕ ಸಂದರ್ಭದಲ್ಲಿ ಅಮೆರಿಕನ್ನರು ಸಂಗಾತಿಯ ಆಯ್ಕೆಯಲ್ಲಿ ನಮಗಿಂತ ಹೆಚ್ಚು ಸ್ವತಂತ್ರರಾಗಿದ್ದಾರೆ ಎಂದು ಹೇಳುವಾಗ ಅವರ ಧ್ವನಿಯಲ್ಲಿ ಮೆಚ್ಚುಗೆಯು ಕಾಣುತ್ತದೆ.

ಹೀಗೆ ಮೂವರೂ ಲೇಖಕರು ಅಮೆರಿಕನ್ ಸಾಮಾಜಿಕ ವ್ಯವಸ್ಥೆಯ ಬಗೆಗೆ ಮಾಡುವ ಪ್ರತಿಕ್ರಿಯೆಗಳಲ್ಲಿ ಕೆಲವು ಕಡೆ ಮೆಚ್ಚುಗೆ ವ್ಯಕ್ತವಾಗುತ್ತದೆ. ಕೆಲವು ಕಡೆ ಅಸಮ್ಮತಿ ವ್ಯಕ್ತವಾಗುತ್ತದೆ. ಇದು ಈ ಲೇಖಕರು ಏಕಮುಖಿಯಾಗಿ ಚಿಂತಿಸುವುದಿಲ್ಲ ಎನ್ನುವುದನ್ನು ಸೂಚಿಸುತ್ತದೆ.

## ೨.೨. ಜನಾಂಗೀಯ ತಾರತಮ್ಯಗಳ ಚರ್ಚೆ

ಅಮೆರಿಕದ ಇತಿಹಾಸವನ್ನು ಗಮನಿಸಿದಾಗ ಅಲ್ಲಿನ ಜನಾಂಗೀಯ ತಾರತಮ್ಯಗಳ ಸ್ವರೂಪ ನಮಗೆ ತಿಳಿಯುತ್ತದೆ. ೧೫-೧೬ನೇ ಶತಮಾನದಲ್ಲಿ ಸಾಹಸಿ ಯುರೋಪಿಯನ್ನರು ಜಲಮಾರ್ಗದ ಮೂಲಕ ವಿವಿಧ ದೇಶಗಳನ್ನು ಕಂಡು ಹಿಡಿದರು. ಚಿನ್ನದ ಆಸೆಗಾಗಿ, ಕಾಫಿ, ಟೀ, ಸಾಂಬರ್ ಪದರ್ಥಾಗಳನ್ನು ತಮ್ಮ ದೇಶಗಳಿಗೆ ಒಯ್ಯಲು ಪ್ರಾರಂಭಿಸಿದ ಯಾತ್ರೆಯಲ್ಲಿ ಆಕಸ್ಮಿಕವೆಂಬಂತೆ ಕೊಲಂಬಸ್ ಎಂಬ ನಾವಿಕನಿಗೆ ೧೪೯೨ರಲ್ಲಿ ದೊರೆತ ದೇಶ ಅಮೆರಿಕ. ಅವನ ಮೂಲ ಉದ್ದೇಶ ಭಾರತವನ್ನು ಕಂಡು ಹಿಡಿಯುವುದಾಗಿತ್ತು. ಆದರೆ ಅಮೆರಿಕ ಎಂಬ ದ್ವೀಪವನ್ನು ಭಾರತ ಎಂದು ತಪ್ಪಾಗಿ ಭಾವಿಸಿ ಅಲ್ಲಿಯ ಜನರು ಕೆಂಪಾಗಿದ್ದರಿಂದ 'ರೆಡ್ ಇಂಡಿಯನ್' ಎಂದು ಕರೆದನು.

ಕೊಲಂಬಸ್ ಅಮೆರಿಕೆಗೆ ಪ್ರವೇಶಿಸಿದಾಗ ಅಲ್ಲಿನ ರೆಡ್ ಇಂಡಿಯನ್ನರು ಅವನನ್ನು ಅತಿಥಿಯನ್ನಾಗಿ ಸ್ವಾಗತಿಸಿ ಸತ್ಕರಿಸಿದರು. ಅವರ ಸಂಪತ್ತು ಐಶ್ವರ್ಯ ಕಂಡ ಕೊಲಂಬಸ್ ಆಶ್ಚರ್ಯ ಚಕಿತನಾದನು. ಚಿನ್ನ

ಸಂಸ್ಕರಿಸುವ ವಿವರಣೆ ಪಡೆದು ಮರಳಿ ತಮ್ಮ ದೇಶಕ್ಕೆ ಹೋಗಲು ಸಿದ್ಧನಾದನು. ಬುಡಕಟ್ಟಿನ ಪದ್ಧತಿಯಂತೆ ಹಡಗಿನವರೆಗೆ ಬೀಳ್ಕೊಡಲು ಬಂದ ಬೆಂಗಾವಲಿನವನಿಗೆ ತನ್ನ ಕತ್ತಿಯಿಂದ ತಿವಿದು ಕೊಂದನು. ಕೊಲೆಯಾದವನ ಮೈಮೇಲಿನ ಬಂಗಾರ ದೋಚಿಕೊಂಡು ಹೋದನು ಅದೇ ಮೊದಲನೆಯ ತಾರತಮ್ಯದ ಬಲಿ ಎಂದು ಕೆ. ಗಿರೀಶ್ ಅವರ 'ಅಮೆರಿಕ ಅಂತರಂಗ'[೧] ಎಂಬ ಕೃತಿಯಲ್ಲಿದೆ.

ಹೀಗೆ ಮರಳಿದ ಕೊಲಂಬಸ್‌ನು ಹೆಚ್ಚಿನ ಸೈನಿಕರೊಂದಿಗೆ ಅಮೆರಿಕದ ಭೂಭಾಗವನ್ನು ಕಬಳಿಸಲು ಪ್ರಯತ್ನಿಸಿದನು. ಅವನ ಜೊತೆಗೆ ಸ್ಪೇನ್‌ನಿಂದ ಇಂಗ್ಲೆಂಡ್‌ನಿಂದಲೂ ಜನ ಬಂದು ಭೂಭಾಗವನ್ನು ರೆಡ್ ಇಂಡಿಯನ್‌ರಿಂದ ವಶಪಡಿಸಿಕೊಂಡರು. ಅಲ್ಲಿನ ಗಣಿಗಳಿಂದ ಸಂಪತ್ತನ್ನು ಲೂಟಿ ಮಾಡಿದರು. ಗಣಿಗಳು ಬರಿದಾದಾಗ ಅಲ್ಲಿಯೇ ನೆಲೆನಿಂತು ಭೂಮಿ ಉಳಲು ತೊಡಗಿದರು. ಭೂಮಿ ಉಳಮೆ ಮಾಡಲು ಜನರ ಕೊರತೆಯಾದಾಗ ಆಫ್ರಿಕಾದಿಂದ ಕರಿಯ ಜನರನ್ನು ಬಲವಂತದಿಂದ ಕರೆತಂದರು. ಅವರನ್ನು ಪ್ರಾಣಿಗಳಂತೆ ದುಡಿಸಿಕೊಂಡರು. ಗಣಿಕೆಲಸ ಮುಗಿದಾಗ ಸುರಂಗಗಳಲ್ಲಿ ಮೂಲನಿವಾಸಿಗಳನ್ನು ಕೆಲವು ಕರಿಯರನ್ನು ಕೊಂದರು. ಅವರ ಭೂಮಿಗಳಲ್ಲಿ ಅನೇಕ ಜನ ಕರಿಯರನ್ನು ಊಳಿಗದವರನ್ನಾಗಿಸಿಕೊಂಡರು. ಆಫ್ರಿಕಾದಲ್ಲಿ ಕರಿಯರನ್ನು ಪ್ರಾಣಿಗಳನ್ನು ಹಿಡಿಯುವಂತೆ ಹಿಡಿದು ಮಾರಾಟ ಮಾಡಲಾಗುತ್ತಿತ್ತು. ಇಂತಹ ಇತಿಹಾಸವನ್ನು ಪಡೆದ ಅಮೆರಿಕದ ಕರಿಯರ ಸ್ಥಿತಿಗತಿಗಳನ್ನು ಕನ್ನಡದ ಲೇಖಕರು ಪ್ರವಾಸ ಕಥನಗಳಲ್ಲಿ ದಾಖಲಿಸುತ್ತಾರೆ.

ಮೂರ್ತಿರಾವ್ ಅವರು ತಮ್ಮ ಪ್ರವಾಸ ಕಥನದಲ್ಲಿ ಅಮೆರಿಕದಲ್ಲಿನ ಜನಾಂಗೀಯ ತಾರತಮ್ಯವನ್ನು ಚರ್ಚಿಸುತ್ತಾರೆ. ಅಮೆರಿಕನ್ನರ ೨೦೦ನೇ ಸ್ವಾತಂತ್ರ್ಯೋತ್ಸವದ ದಿನ ಭಾಷಣದಲ್ಲಿನ ಕೆಲವು ಭಾಗಗಳನ್ನು ಲೇಖಕರು ದಾಖಲಿಸುತ್ತ ಅಲ್ಲಿನ ವರ್ಣ ತಾರತಮ್ಯವನ್ನು ನೆನಪಿಸುತ್ತಾರೆ.

"ಎಷ್ಟೋ ಬಿಳಿಯ ಜನರು ಈಗಾಲೂ 'ನೀಗ್ರೋ' ಎಂದರೆ ಉರಿದು ಬೀಳುತ್ತಾರೆ. ನಮ್ಮ ನ್ಯಾನ್ಸಿಯ ಹತ್ತಿರದ ಬಂಧುವೊಬ್ಬರು ಹಳೆಯ ಕಾಲದವರು ಮೊನ್ನೆ ಮೊನ್ನೆ ತೀರಿಕೊಂಡವರು ಹೇಳುತ್ತಿದ್ದರಂತೆ, "ಇದಕ್ಕೆಲ್ಲ (ಅಂದರೆ ಅಮೆರಿಕದಲ್ಲಿ ಅಹಿತವೇನಾದರೂ ನಡೆದರೂ - ಸುಂಟರಗಾಳಿ, ಭೂಕಂಪ ಇತ್ಯಾದಿ. ಅದಕ್ಕೆಲ್ಲ) ಈ ಹಾಳು ನೀಗ್ರೋ ಕಾರಣ ಅವರನ್ನು ಒದ್ದೋಡಿಸಿ ಎಲ್ಲ ಸರಿ ಹೋಗುತ್ತೆ" (ಪು. ೨೩೯).

ಲೇಖಕರ ಈ ನೆನಪು ನೀಗ್ರೋ ಜನರನ್ನು ಶತಮಾನಗಳಿಂದಲೂ ದಮನಕ್ಕೆ ಒಳಗಾಗುವಂತೆ ಮಾಡಿದ ಪ್ರಾಬಲ್ಯವನ್ನು ಮೆರೆದ ಜನವರ್ಗದ ಮಾತು ಎಂಬಂತೆ ಗೋಚರಿಸುತ್ತದೆ. ವರ್ಣೀಯರ ವಿಷಯದಲ್ಲಿ ಅಮೆರಿಕನ್ನರು ಉದಾರಿಗಳು ಎಂದು ಲೇಖಕರು ಒಪ್ಪುತ್ತಾರೆ. ಭಾರತೀಯರಿಗೆ ಮತ್ತು ನೀಗ್ರೋಗಳಿಗೆ ಅಮೆರಿಕನ್ನರು ಕಾಣುವ ರೀತಿಗಳು ಬೇರೆಯಾಗಿವೆ ಎಂದು ಅವರು ಹೇಳುತ್ತಾರೆ.

ಬಿ.ಜಿ.ಎಲ್. ಸ್ವಾಮಿಯವರು ವರ್ಣ ತಾರತಮ್ಯದ ಕುರಿತು ಪ್ರವಾಸ ಕಥನದಲ್ಲಿ ಅಷ್ಟಾಗಿ ಚರ್ಚಿಸುವುದಿಲ್ಲ. ಅವರು ಹಿಂದೆ ಅಮೆರಿಕನ್ನರು ತಮ್ಮ ಮನೆಗಳಲ್ಲಿ ಆಳುಗಳನ್ನು ಇಟ್ಟುಕೊಂಡಿದ್ದರು. ಊಟ ಬಡಿಸುವುದಕ್ಕಾಗಿ ನೀಗ್ರೋಗಳನ್ನು ಬಳಸಿಕೊಂಡಿದ್ದರು. ಆದರೆ, ಈಗಿನ ಕಾಲದಲ್ಲಿ ಇಲ್ಲ ಎಂಬುದನ್ನು

ಅಷ್ಟೇ ಚಿತ್ರಿಸುತ್ತಾರೆ. ಲೇಖಕರು ನೀಗ್ರೋಗಳ ಬಗೆಗೆ ಅಷ್ಟಾಗಿ ಪ್ರವಾಸ ಕಥನದಲ್ಲಿ ಚರ್ಚಿಸದೇ ಇರುವುದಕ್ಕೆ ಎರಡು ಕಾರಣಗಳಿವೆ.

ಒಂದು ಅವರು ಹೋದ ಕಾಲದಲ್ಲಿ ಅಮೆರಿಕದಲ್ಲಿ ವರ್ಣ ತಾರತಮ್ಯದ ಪ್ರಮಾಣ ಕಡಿಮೆಯಾಗಿರುವುದು. ಎರಡನೆಯದು ಸ್ವಾಮಿಯವರು ಅಮೆರಿಕದ ವಾಸ್ತವ ಜನ-ಜೀವನಕ್ಕಿಂತ ಅಲ್ಲಿನ ವಿಶ್ವವಿದ್ಯಾಲಯಗಳ ವ್ಯಾಪ್ತಿಯಲ್ಲಿನ ಅನುಭವಗಳನ್ನು ಮುಖ್ಯವಾಗಿ ತಮ್ಮ ಪ್ರವಾಸ ಕಥನದಲ್ಲಿ ದಾಖಲಿಸಿರುವುದು. ಈ ಎರಡು ಕಾರಣಗಳಿಗಾಗಿ ಲೇಖಕರು ನೀಗ್ರೋ ಜನಾಂಗದವರ ಸ್ಥಿತಿಗತಿಗಳನ್ನು ಹೆಚ್ಚು ಚಿತ್ರಿಸಲು ಸಾಧ್ಯವಾಗಿಲ್ಲ ಎನ್ನಬಹುದು.

ದಮನಿತ ವರ್ಗದ ಪರವಾಗಿ ಪ್ರಭುತ್ವದ ವಿರೋಧವಾಗಿ ಚಿಂತಿಸುವ, ಬಂಡಾಯ ಲೇಖಕಿಯಾದ ಸಾರಾ ತಮ್ಮ ಪ್ರವಾಸ ಕಥನದುದ್ದಕ್ಕೂ ವರ್ಗ-ವರ್ಣ ಜನಾಂಗೀಯ ತಾರತಮ್ಯಗಳನ್ನು ಚಿತ್ರಿಸುತ್ತಾರೆ. ಆಫ್ರಿಕಾದ ಕಾಡುಗಳಿಂದ ಕರಿಯರನ್ನು ಹಿಡಿದು ತಂದು ದುಡಿಸಿಕೊಂಡು ಬೇಡವೆನಿಸಿದಾಗ ಬಿಳಿಯರು ಅವರನ್ನು ಮಾರಾಟ ಮಾಡಿದರು. ಹಣ ಸಿಗುತ್ತದೆ ಎನ್ನುವಾಗ ಮನುಷ್ಯರನ್ನೆ ಮಾರಾಟ ಮಾಡುವಂತಹ ಕಾರ್ಯಕ್ಕೂ ಮನುಷ್ಯ ಸಿದ್ಧನಿರುತ್ತಾನೆ ಎಂಬುದನ್ನು ಸಾರಾ ಆಕ್ರೋಶದಿಂದ ಕಥನದಲ್ಲಿ ಬರೆಯುತ್ತಾರೆ. ಕರಿಯರ ಪರವಾಗಿ ಚಿಂತಿಸುವ ಅವರು ತಮ್ಮ ಮನದಾಳದ ಮಾತುಗಳನ್ನು ಆಡಿರುವುದು ಕಂಡುಬರುತ್ತದೆ. ಅಂತಹ ಕಳಕಳಿಯ ಕೆಲವು ಮಾತುಗಳು ಇಂತಿವೆ.

"ಕರಿಯರನ್ನು ಎಷ್ಟೊಂದು ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದರೆಂದರೆ, ಹಡಗಿನಲ್ಲಿ ಇವರನ್ನು ಕರೆದುಕೊಂಡು ಬರುವಾಗ ಆಹಾರದ ಅಭಾವ ತಲೆದೋರಿದರೆ ಆಹಾರ ಸಾಕಾಗುವಷ್ಟು ಜನರನ್ನಿಟ್ಟುಕೊಂಡು ಉಳಿದವರನ್ನು ನಿರ್ದಯವಾಗಿ ಪ್ರಾಣಿಗಳನ್ನೆಸೆಯುವಂತೆ ಕಡಲಿಗೆ ಎಸೆಯುತ್ತಿದ್ದರು; ಇವರಿಗೆ ರೋಗ ಬಂದರೆ ಔಷಧ ಕೊಡುವುದು ಪ್ರಾಣಿ ವೈದ್ಯರು. ಯಾರು ಎಷ್ಟು ದಿನ ಬದುಕಬೇಕು, ಯಾವಾಗ ಸಾಯಬೇಕೆಂಬುದನ್ನು ನಿರ್ಧರಿಸುವವರು ಇವರ ಯಜಮಾನರಾಗಿದ್ದರು! ತಮ್ಮ ದೇಶದಿಂದ ರಕ್ತಸಂಬಂಧಿಗಳ ನಡುವಿನಿಂದ, ತಮ್ಮ ಸಂಸ್ಕೃತಿ ಭಾಷೆ ಎಲ್ಲದರಿಂದಲೂ ತಮ್ಮನ್ನು ಬೇರ್ಪಡಿಸಿ ಪ್ರಾಣಿಗಳನ್ನು ಬೇಟೆಯಾಡಿದಂತೆ ತಮ್ಮನ್ನು ಬೇಟೆಯಾಡಿದ್ದನ್ನು ಈ ಜನರು ಹೇಗೆ ಸಹಿಸಿಕೊಂಡಿರಬಹುದು? ಹೊಲಗದ್ದೆ ಕಾರ್ಖಾನೆಗಳಲ್ಲಿ ದುಡಿಯಲು ಬಲಾಢ್ಯರಾದ ಹೆಣ್ಣು ಗಂಡುಗಳನ್ನು ಇವರು ಹಿಡಿದು ತಂದು ಮಾರಾಟ ಮಾಡುತ್ತಿದ್ದರು. ದನದ ಹಲ್ಲುಗಳನ್ನು ಲೆಕ್ಕ ಮಾಡಿದಂತೆ ಇವರ ಹಲ್ಲುಗಳನ್ನು ಲೆಕ್ಕ ಮಾಡಿ ಕೈಕಾಲುಗಳನ್ನು ಪರೀಕ್ಷಿಸಿ ಅವರ ಪ್ರಾಯ ಮತ್ತು ಆರೋಗ್ಯಕ್ಕನುಸಾರವಾಗಿ ಬೆಲೆ ಕಟ್ಟಲಾಗುತ್ತಿತ್ತು. ಇವರು ಓಡಿ ಹೋಗದಂತೆ ಸಂಕೋಲೆ ತೊಡಿಸಲಾಗುತ್ತಿತ್ತು" (ಪು. ೨೧).

ದಮನಿತರ, ಶೋಷಿತರ ಪರ ಕಾಳಜಿ ಇದ್ದುದರಿಂದಲೇ ತಮ್ಮ ಪ್ರವಾಸ ಕಥನದಲ್ಲಿ ಕರಿಯರ ಶೋಷಣೆಯನ್ನು ಬವಣೆ ಯಾತನೆಗಳನ್ನು ದಾಖಲಿಸಲು ಹಾಗೂ ಅವರ ಪರವಾಗಿ ಚಿಂತನೆ ಮಾಡಲು ಲೇಖಕಿಗೆ ಸಾಧ್ಯವಾಗಿದೆ. ಭಾರತದಲ್ಲಿ ದಲಿತರ ಸ್ಥಿತಿಗತಿಗಳ ಬಗ್ಗೆ ಅರಿವುಳ್ಳ ಲೇಖಕರು ಸಹಜವಾಗಿ

ಅಮೆರಿಕದ ತಮ್ಮ ಪ್ರವಾಸ ಕಥನಗಳಲ್ಲಿ ಅಲ್ಲಿನ ಕರಿಯರ ಬದುಕನ್ನು ಕುರಿತು ಹೆಚ್ಚಿನ ಚಿಂತನೆ ಮಾಡಿರುವುದನ್ನು ಗಮನಿಸಬಹುದು. 'ಆಲ್ಬರ್ಟ್' ಎಂಬ ಲೋಕಸೇವಕ ದೀನಬಂಧು ಒಬ್ಬ ಬಿಳಿಯನಾಗಿ ಕರಿಯರ ಬಗೆಗೆ ಒಲವು ಹೊಂದಿದ್ದನು ಎಂಬುದನ್ನು ಬಾಗಲೋಡಿ ದೇವರಾಯ ಅವರು ಪ್ರಬುದ್ಧ ಕರ್ನಾಟಕದಲ್ಲಿ ನೆನಪಿಸಿಕೊಳ್ಳುತ್ತಾರೆ.[೨] "ಯೆಸುದೇವನ ಅನುಯಾಯಿಗಳನ್ನೆಲ್ಲಪಡುವ ಐರೋಪ್ಯರ ಕೈಯಿಂದ, ಕಪ್ಪು ಜನರು ನಡೆಸಿದ, ಮೃತ್ಯು, ನಾಶ, ಹಿಂಸೆ ಕ್ಷಮೆಗಳಿಗೆ ಮಿತಿಯಿಲ್ಲ. ಈ ಪಾಪದ ಪುರಾಣ ಓದಲು ಅಸಾಧ್ಯ". ಈ ಮಾತನ್ನು ಗಮನಿಸಿದಾಗ ಕರಿಯರಿಗೆ ಬಿಳಿಯರ ಹಿಂಸೆಯ ಸ್ವರೂಪಗಳು ಎಂತಹವು ಎಂಬುದು ತಿಳಿದು ಬರುತ್ತದೆ.

### ೨.೩. ಮಹಿಳಾ ಜಗತ್ತಿನ ಚಿತ್ರಣ

ಇತ್ತೀಚಿನ ದಿನಗಳಲ್ಲಿ ಮಹಿಳೆಯ ಬಗೆಗಿನ ಚರ್ಚೆಗಳು ಮಹತ್ವವನ್ನು ಪಡೆದುಕೊಳ್ಳುತ್ತಿವೆ. ಮಹಿಳೆಯೂ ಕೂಡ ಸ್ವತಂತ್ರಳು. ಪುರುಷರಂತೆ ಅವಳಿಗೂ ಕೂಡ ಎಲ್ಲ ಕ್ಷೇತ್ರಗಳಲ್ಲಿ ಪಾಲ್ಗೊಳ್ಳುವ ಹಕ್ಕಿದೆ ಎಂದು ಹೋರಾಟಗಳು ನಡೆಯುತ್ತಿವೆ. ಅವಳ ಸಮಸ್ಯೆಗಳಿಗೆ ಪರಿಹಾರ ದೊರಕಿಸಿಕೊಡಲು ಮಹಿಳಾ ಆಯೋಗ ಭಾರತದಲ್ಲಿ ರಚನೆಯಾಗಿದೆ. ವಿಶ್ವವಿದ್ಯಾಲಯಗಳು ವಿಭಾಗಗಳನ್ನು ತೆರೆದು ಅಧ್ಯಯನಕ್ಕೆ ಅನುಕೂಲ ಮಾಡಿಕೊಟ್ಟಿವೆ. ಭಾರತದ ಮಹಿಳೆಯರಿಗಿಂತ ಅಮೇರಿಕದ ಮಹಿಳೆಯರ ಸಮಸ್ಯೆಗಳು ಹೇಗೆ ಭಿನ್ನವಾಗಿವೆ? ಎಂಬುದನ್ನು ಕನ್ನಡದ ಸಂವೇದನಾಶೀಲ ಲೇಖಕರು ಹೇಗೆ ತಮ್ಮ ಪ್ರವಾಸ ಕಥನಗಳಲ್ಲಿ ಗ್ರಹಿಸಿದ್ದಾರೆ, ಮಹಿಳಾ ಜಗತ್ತಿನ ಚಿತ್ರಣ ಮಾಡುವಾಗ ಪುರುಷ ಲೇಖಕರಿಗಿಂತ ಮಹಿಳಾ ಲೇಖಕರು ಹೇಗೆ ಭಿನ್ನವಾಗಿ ಚಿತ್ರಿಸುತ್ತಾರೆ ಎನ್ನುವುದನ್ನು ಚರ್ಚಿಸುವುದು ಅಗತ್ಯವಾಗಿದೆ. ಮಹಿಳೆಯರಿಗೆ ಪುರುಷ ಸಮಾನ ಸ್ಥಾನಮಾನಗಳಿವೆ ಎಂಬ ಕಲ್ಪನೆಯಿದೆ. ಅದು ಎಷ್ಟರಮಟ್ಟಿಗೆ ಇದೆ ಎಂಬುದನ್ನು ಪ್ರವಾಸ ಕಥನಗಳ ಮೂಲಕ, ಲೇಖಕರ ಅನುಭವಗಳ ಮೂಲಕ ವಿಶ್ಲೇಷಿಸಲು ಯತ್ನಿಸಲಾಗುವುದು.

ಎ.ಎನ್. ಮೂರ್ತಿರಾವ್ ಅವರು 'ಅಪರವಯಸ್ಕನ ಅಮೆರಿಕಯಾತ್ರೆ'ಯಲ್ಲಿ ಭಾರತೀಯ ಮತ್ತು ವಿದೇಶಿ ಮಹಿಳೆಯರ ಉಡುಗೆ ತೊಡುಗೆಗಳಲ್ಲಿನ ಭಿನ್ನತೆಯನ್ನು ಗುರುತಿಸುತ್ತಾರೆ. ಮಹಿಳೆಯರ ಬಗೆಗೆ ಅಪಾರ ಗೌರವ ವ್ಯಕ್ತಪಡಿಸುವ ಲೇಖಕರು ಸಮಾನತೆಯ ದೃಷ್ಟಿಯಿಂದ ಹಾಗೂ ಉದಾರ ಮನೋಭಾವದಿಂದ ಚಿತ್ರಿಸಿರುವುದು ಕಂಡುಬರುತ್ತದೆ. ಲೇಖಕರು ತಮ್ಮ ಸೊಸೆ ನ್ಯಾನ್ಸಿ ಭಾರತಕ್ಕೆ ಬಂದಾಗ ಅವಳಿಗೆ ತೊಂದರೆಯಾಗದಂತೆ ನೋಡಿಕೊಳ್ಳುತ್ತಾರೆ. ತಮ್ಮ ಹೆಂಡತಿ ಜಯಲಕ್ಷ್ಮಿಯವರಿಗೂ ಸಹ ಅತ್ತೆ ಸೊಸೆಯರು ಅನ್ಯೋನ್ಯವಾಗಿರುವಂತೆ ಹೇಳುತ್ತಾರೆ. ವಿದೇಶಿ ಸೊಸೆ ತಮ್ಮ ಮನೆಯಲ್ಲಿ ಮಡದಿಯ ಜೊತೆಗೆ ಹಿಂದೂ ಸಂಪ್ರದಾಯದಂತೆ ಪೂಜಾ ವಿಧಾನದಲ್ಲಿ ಪಾಲ್ಗೊಂಡ ಸನ್ನಿವೇಶವನ್ನು ಪ್ರವಾಸ ಕಥನದಲ್ಲಿ ನೆನಪಿಸಿ ಕೊಂಡಿದ್ದಾರೆ. ಅದು ಇಂತಿದೆ :

"ಮೂರು ನಾಲ್ಕು ದಿನಗಳಲ್ಲೆ ಗೌರಿಯ ಹಬ್ಬ ಬಂತು. ಅವತ್ತು ನಾನು ನೋಡಿದ ದೃಶ್ಯವನ್ನು ಎಂದಿಗೂ ಮರೆಯಲಾರೆ ನ್ಯಾನ್ಸಿ ಸ್ನಾನ ಮಾಡಿ ತಲೆ ಬಾಚಿ ಜಡೆ ಹೆಣೆದುಕೊಂಡು ಹಣೆಗೆ ಕುಂಕುಮ

ಇಟ್ಟು ಜಯಲಕ್ಷ್ಮಿ ಹೇಳಿಕೊಟ್ಟಂತೆ ಅವಳ ಮಗ್ಗುಲಲ್ಲಿ ಕುಳಿತು ಗೌರೀ ಪೂಜೆ ಮಾಡುತ್ತಿದ್ದಳು. ನನ್ನ ಕಣ್ಣಲ್ಲಿ ನೀರು ಬಂದದ್ದನ್ನು ಯಾರೂ ಕಾಣದಿರಲೆಂದು ನಾನು ಅಲ್ಲಿಂದ ಹೊರಟು ಹೋದೆ. ಒಂದು ಕಡೆ ತಾನು ನಂಬಿದ ದೈವ ಸಾವಿರಾರು ವರ್ಷಗಳಿಂದ ಬಂದ ನಿಯಮಗಳು, ವಿಧಿನಿಷೇಧಗಳು; ಮತ್ತೊಂದು ಕಡೆ ಕ್ರೈಸ್ತ ಮತಾನುಯಾಯಿಯಾದ ಹೆಣ್ಣು ಹಿಂದೆ ಮಾಂಸ ತಿನ್ನುತ್ತಿದ್ದವಳು. ಇವೊಂದು ಜಯಲಕ್ಷ್ಮಿಯ ನೈಸರ್ಗಿಕ ಹಿರಿತನಕ್ಕೆ ಕುಂದು ತರಲಿಲ್ಲ. ಗೌರೀ ದೇವಿಯ ವರದ ಹಸ್ತ ತನಗೆ ಬೇಕಾದರೆ ತನ್ನ ಸೊಸೆಗೆ ಬೇಡವೇ? ಇವಳೊಡನೆ ನಲವತ್ತು ವರ್ಷ ಸಂಸಾರ ಮಾಡಿದ್ದೆ. ಆದರೂ ಅವಳ ಔದಾರ್ಯದ ಮತ್ತು ಘನತೆಯ ಔನ್ನತ್ಯವನ್ನು ತಿಳಿದಿರಲಿಲ್ಲ! ಅವಳನ್ನು ಮನಸಾರ ಹೊಗಳಬೇಕಿತ್ತು" (ಪು. ೪೪).

ಲೇಖಕರ ಮೇಲಿನ ನೆನಪು ಎರಡು ವಿಭಿನ್ನ ದೇಶಗಳ ಸಂಸ್ಕೃತಿಗಳು ಒಂದು ಕಡೆ ಮೇಳೈಸಿರುವುದನ್ನು ಹೇಳುತ್ತದೆ. ವಿಭಿನ್ನ ಸಂಸ್ಕೃತಿಯ ಮಹಿಳೆಯರು ಒಂದು ಕಡೆ ಕೂಡಿ ಸಹಕಾರದಿಂದ, ಅನ್ಯೋನ್ಯತೆಯಿಂದ ಇರುವುದನ್ನು ಕಂಡು ಲೇಖಕರು ಭಾವಪರವಶರಾಗುತ್ತಾರೆ. ವಿದೇಶಿ ಮಹಿಳೆ ತನ್ನ ಮೂಲ ಸಂಪ್ರದಾಯಗಳನ್ನು ಬದಿಗೆ ಸರಿಸಿ ಹಿಂದೂ ಸಂಪ್ರದಾಯವನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸುತ್ತಿರುವುದು ಮೇಲಿನ ಸನ್ನಿವೇಶದಲ್ಲಿ ಕಂಡುಬರುತ್ತದೆ. ಇದು ಲೇಖಕರಿಗೆ ಸಂತೋಷವಾಗಲು ಕಾರಣವಾಗಿದೆ. ಹಿಂದೂ ಧರ್ಮಕ್ಕಿಂತ ಭಿನ್ನವಾದ ಧಾರ್ಮಿಕ ಪದ್ಧತಿಯಲ್ಲಿ ಬೆಳೆದ ಸೊಸೆ, ಹಿಂದೂ ಪದ್ಧತಿಯನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತಿರುವುದು ಲೇಖಕರಿಗೆ ಸೋಜಿಗದ ಸಂಗತಿಯಾಗಿ ಕಂಡಿದೆ. ನ್ಯಾನ್ಸಿಯ ಗೌರೀ ಪೂಜೆಗೆ ಸಹಕರಿಸಿದ ಪತ್ನಿ ಜಯಲಕ್ಷ್ಮಿಯ ಸಹಕಾರಿ ಮನೋಭಾವವನ್ನು ಲೇಖಕರು ಧನ್ಯತೆಯ ಮನೋಭಾವದಿಂದ ನೆನಪಿಸಿಕೊಳ್ಳುತ್ತಾರೆ. ಕಥನದ ಮತ್ತೊಂದು ಭಾಗದಲ್ಲಿ ಮೂರ್ತಿರಾವ್ ಅವರು ಮೊದಲು ಅಮೆರಿಕನ್ ಮಹಿಳೆಯರ ಉಡುಪುಗಳ ಬಗೆಗೆ ವಿರೋಧವನ್ನು ವ್ಯಕ್ತಪಡಿಸುತ್ತಾರೆ. ಆದರೆ ನಂತರದ ಘಟ್ಟದಲ್ಲಿ ಅವರಲ್ಲಿ ಈ ಬಗ್ಗೆ ಮೃದುತ್ವ ಕಂಡುಬರುತ್ತದೆ.

"ವೇಷಭೂಷಣಗಳಲ್ಲಿ ಪಾಶ್ಚಾತ್ಯ ಸಂಪ್ರದಾಯ ಸಂಪೂರ್ಣ ನಗ್ನತೆಯನ್ನು ಇನ್ನೇನು ಸಾಧಿಸಲಿದೆ ಎನ್ನುವಂಥ ವಿವಸ್ತ್ರತೆಯ ಫ್ಯಾಷನ್ ಕೂಡ - ಇವರೆಲ್ಲರನ್ನೂ ದಾಸ್ಯಕ್ಕೆ ಎಳೆದಿದೆ. ಈ ಮಾತಿಗೆ ವಿನಾಯಿತಿ - ಇದನ್ನು ಆನಂದದಿಂದ ಹೇಳುತ್ತೇನೆ. ನಮ್ಮ ಭಾರತೀಯ ಸೀರೆ, ಬಿಕನಿ ಭಾರತೀಯ ಮಹಿಳೆಯರನ್ನು ಗೆದ್ದಿಲ್ಲ; ಅಥವಾ ಗೆದ್ದಿದ್ದರೆ ಅದು ನನ್ನ ಗಮನಕ್ಕೆ ಬಂದಿಲ್ಲ" (ಪು. ೧೧೨).

ಹೀಗೆ ಹೇಳಿದ ಲೇಖಕರೇ ಮುಂದೆ "ಬಿಕನಿ ಬಗೆಗೆ ಅಸಹ್ಯವಾಗುತ್ತಿತ್ತು. ಈಗ ಅದು ಹಾಳಾಗಿ ಹೋಗಲಿ ಬಿಡು ಎಂದು ಆ ವಿಷಯ ಮನಸ್ಸಿನಿಂದ ಹೊರದೂಡಬಲ್ಲೆ" ಎಂದು ಕಥನದ ಇನ್ನೊಂದು ಭಾಗದಲ್ಲಿ ಹೇಳುತ್ತಾರೆ. ಇದು ಅವರ ಉದಾರವಾದಿ ಮನೋಭಾವನೆಯನ್ನು ತಿಳಿಸುತ್ತದೆ.

ಒಟ್ಟಾರೆಯಾಗಿ ಮೂರ್ತಿರಾವ್ ಅವರು ಉದಾರವಾದಿ ಮನೋಭಾವದಿಂದ ಮಹಿಳೆಯ ಪಾತ್ರಗಳನ್ನು ಚಿತ್ರಿಸಿದ್ದಾರೆ. ಭಿನ್ನ ಸಂಸ್ಕೃತಿಗಳಲ್ಲಿ ಮಹಿಳೆಯರು ಹೇಗೆ ಅನಿವಾರ್ಯತೆಯ ಕ್ಷಣಗಳಲ್ಲಿ ಹೊಂದಿಕೊಳ್ಳಲು ಪ್ರಯತ್ನಿಸುತ್ತಾರೆ ಎಂಬುದನ್ನು ತಮ್ಮ ಸೊಸೆಯ ಉದಾಹರಣೆಯ ಮೂಲಕ ಲೇಖಕರು ಹೇಳುತ್ತಾರೆ.

ಬಿ.ಜಿ.ಎಲ್. ಸ್ವಾಮಿಯವರು ಮೂರ್ತಿರಾವ್ ಅವರಿಗಿಂತ ಭಿನ್ನರಾಗಿ ಮಹಿಳೆಯರನ್ನು ಕಂಡಿದ್ದಾರೆ. ಅವರ ಪ್ರವಾಸ ಕಥನದಲ್ಲಿನ 'ನನ್ನ ಟೋಪಿ' ಮತ್ತು 'ಸೀರೆಯ ಕಥೆ' ಎಂಬ ಅಧ್ಯಾಯಗಳು ಅಮೆರಿಕನ್ ಮಹಿಳೆಯರ ಚಿತ್ರಣಗಳನ್ನು ನೀಡುತ್ತವೆ. ಅದರಲ್ಲಿ ಲೇಖಕರು ಅಮೆರಿಕನ್ ಮಹಿಳೆಯರಲ್ಲಿ ವಸ್ತ್ರ ವ್ಯಾಮೋಹವನ್ನು ಮತ್ತು ವಿಭಿನ್ನ ಆಸಕ್ತಿಗಳು ಇರುವುದನ್ನು ಹೇಳುತ್ತಾರೆ.

ತಲೆ ತೊಡುಗೆಯ ಕುರಿತ 'ನನ್ನ ಟೋಪಿ' ಎಂಬ ಅಧ್ಯಾಯದಲ್ಲಿ ತಮಗಾದ ಅನುಭವವನ್ನು ಹೇಳುತ್ತಾರೆ. ತಮ್ಮ ಟೋಪಿ ಡೋರಿ ಎಂಬ ಮಹಿಳೆಗೆ ಹಿಡಿಸಿದ್ದು ಅದನ್ನು ಪಡೆಯಲು ಅವಳು ತಾಯಿಯೊಡನೆ ಮಾಡುವ ಪ್ರಯತ್ನಗಳನ್ನು ದಾಖಲಿಸುತ್ತಾರೆ. ಆ ಮೂಲಕ ಅಮೇರಿಕನ್ ಮಹಿಳೆಯರು ಫ್ಯಾಷನ್ ಲೋಕಕ್ಕೆ ಮರುಳಾಗಿದ್ದು, ಅಂತಹ ಫ್ಯಾಷನ್ ಜಗತ್ತಿನ ವಸ್ತುಗಳನ್ನು ಪಡೆದುಕೊಳ್ಳಲು ನಿರ್ಲಜ್ಜರಾಗಿ, ನಾಚಿಕೆ ಪಟ್ಟುಕೊಳ್ಳದೆ ಪರರ ವಸ್ತುಗಳನ್ನು ಕೇಳಿ ಪಡೆದುಕೊಳ್ಳುತ್ತಾರೆ ಎನ್ನುವುದನ್ನು ಸೂಚಿಸುತ್ತಾರೆ. ಮುಖ್ಯವಾಗಿ ಅಮೆರಿಕನ್ ಸಂಸ್ಕೃತಿಯಲ್ಲಿ ಪಾರ್ಟಿಗಳಲ್ಲಿ ವಿಶೇಷ ರೀತಿಯ ಉಡುಪು ತೊಟ್ಟು ಉಳಿದವರಿಗಿಂತ ವಿಶಿಷ್ಟವಾಗಿ ಕಾಣಲು ಬಯಸುವ ಹವ್ಯಾಸವಿದೆ. ಅದಕ್ಕಾಗಿ ತಮ್ಮ ಟೋಪಿಯನ್ನು ಡೋರಿ ತನ್ನ ತಾಯಿಯೊಂದಿಗೆ ಬಂದು ತೆಗೆದುಕೊಂಡು ಹೋದಳು ಎಂದು ಲೇಖಕರು ಗಮನಿಸಿದ್ದಾರೆ.

'ಸೀರೆಯ ಕತೆ' ಎಂಬ ಅಧ್ಯಾಯದಲ್ಲೂ ಸಹ ಉಡುಪಿನ ಚರ್ಚೆ ಇದೆ. ನಾಲ್ಕು ಜನ ವಿದೇಶಿ ಮಹಿಳೆಯರ ಕೈಯಲ್ಲಿ ಹಿಂದೂ ಸಂಪ್ರದಾಯದ ಸೀರೆ ಪಟ್ಟ ಯಾತನೆಯ ಚಿತ್ರಣ ನೀಡುತ್ತಾರೆ. ಅವರೇ ಹೇಳುವಂತೆ, "ಈಗ ನಾನು ವರ್ಣಿಸಲು ಹೊರಟಿರುವುದು ಒಂದು ವಿಧದಲ್ಲಿ ಸೀರೆಯ ಸೊಬಗಿನ ವೈಖರಿಯನ್ನೆ, ಆದರೂ ಅದರ ಬೆಡಿಗಿಗೆ ಮನಸೋತ ಅಮೆರಿಕನ್ ಹೆಂಗಸರ ಕೈಲಿ ಸೀರೆ ಅನುಭವಿಸಿದ ಅವಸ್ಥೆಯನ್ನು" (ಪು. ೩೫).

ಸಾಮಾನ್ಯವಾಗಿ ಜನ ತಮ್ಮ ಸಂಪ್ರದಾಯಿಕ ಉಡುಪಿಗಿಂತ ಭಿನ್ನವಾಗಿರುವ ಉಡುಪನ್ನು ಮೆಚ್ಚುತ್ತಾರೆ. ಅದರಂತೆ ಅಮೆರಿಕನ್ ಮಹಿಳೆಯರು ಸೀರೆಯನ್ನು ಮೆಚ್ಚಿರುವುದು ಸಹಜ. ಆದರೆ ಅದನ್ನು ಉಡುವ ಶೈಲಿಯಲ್ಲಿ ಮಾತ್ರ ಬದಲಾವಣೆಯನ್ನು ತರುತ್ತಾರೆ. ಪಾಶ್ಚಾತ್ಯರು ತಮ್ಮ ಸೌಂದರ್ಯವನ್ನು ಪ್ರದರ್ಶಿಸಿಕೊಳ್ಳುವ ಮನೋಭಾವದವರೆಂಬುದನ್ನು ಲೇಖಕರು ಹೇಳುತ್ತಾರೆ. ಸೀರೆಯ ಕುರಿತಾಗಿ ಲೇಖಕರು ಮಾಡುವ ಕೆಲವು ಕಾಮೆಂಟುಗಳು ಇಂತಿವೆ :

"ಸೀರೆಯ ವಿಷಯವಾಗಿ ಅವರಲ್ಲಿ ಮೂಡಿದ ಕೆಲವು ಅಭಿಪ್ರಾಯಗಳಂತೂ ತೀರ ವಿಚಿತ್ರವಾದವುಗಳು. ಅಮೆರಿಕದ ಹೆಂಗಸರಿಗೆ ಸರ್ವೇಸಾಧಾರಣವಾಗಿ ತಮ್ಮ ನೈಜ ಸೌಂದರ್ಯವನ್ನು ಪ್ರದರ್ಶಿಸಿಕೊಳ್ಳಲು ಹಂಬಲ. 'ದೇವರು ಸೌಂದರ್ಯಮಯವಾದ ಕಾಲುಗಳನ್ನು ನನಗೆ ಕೊಟ್ಟಿರುವಾಗ ನಾನದನ್ನು ಪ್ರದರ್ಶಿಸಿಕೊಳ್ಳುವುದರಲ್ಲಿ ತಪ್ಪೇನಿದೆ?' ಎಂದು ಸವಾಲು ಹಾಕುತ್ತಾರೆ. ಇಂಥವರು ಸೀರೆಗೇನೊ ಸಂಪೂರ್ಣವಾಗಿಯೆ ಮನಸೋತವರು. ಪಾರ್ಟಿಗಳಲ್ಲಿ ಉಟ್ಟುಕೊಳ್ಳಬೇಕೆಂಬ ಆಸೆಗೂ ಬಲಿಯಾದರು. ಇವರಿಗಿರುವುದು ಒಂದೇ ಕೊರತೆ - ಉಡುಪು ಮೈಯನ್ನು ಮರೆಯಾಗಿಸುವುದೆಂಬುದು. ಹೇಗಾದರೂ

ಮಾಡಿ ಸೀರೆಯನ್ನಂತೂ ಉಟ್ಟುಕೊಳ್ಳಬೇಕು; ಆದರೆ ಅದು ಮೊಣಕಾಲಿನಿಂದ ಮೇಲಕ್ಕಿರಬೇಕು ಎಂಬ ಹಟ. ಆ ಚಟಕ್ಕೆ ಮೊದಲು ಬಲಿಯಾದವಳು ನನ್ನ ಲ್ಯಾಬರೋಟರಿಯಲ್ಲಿ ಓದುತ್ತಿದ್ದ ಪೆಗ್ಗಿ ಎಂಬ ಹುಡುಗಿ'' (ಪು. ೩೮).

ಈ ಸನ್ನಿವೇಶದಿಂದ ಅಮೆರಿಕನ್ ಮಹಿಳೆಯರು ಉಡುಪಿನಲ್ಲಿ ಆದಷ್ಟು ಕಡಿಮೆ ಬಟ್ಟೆ ಬಳಸುತ್ತಾರೆ ಎಂಬುದು ಗೊತ್ತಾಗುತ್ತದೆ. ಮುಖ್ಯವಾಗಿ ಅವರು ನೈಜ ಸೌಂದರ್ಯವನ್ನು ತೋರ್ಪಡಿಸುವ ಬಯಕೆ ಒಂದಾದರೆ, ನಗ್ನತೆಯ ಬಗೆಗೆ ಅಷ್ಟೊಂದು ಮಡಿವಂತಿಕೆ ಇರದೇ ಇರುವುದು ಇನ್ನೊಂದು. ಪಾಶ್ಚಾತ್ಯ ಸಂಸ್ಕೃತಿಯಲ್ಲಿ ನಗ್ನತೆಯು ಮುಜುಗರವನ್ನು ತರುವುದಿಲ್ಲ. ಆದರೆ ಭಾರತದಲ್ಲಿ ಇದು ಬೇರೆಯಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಭಾರತದಲ್ಲಿಯೂ ಸಹ ನಗರ ಪ್ರದೇಶಗಳಲ್ಲಿ ಯುವ ಸಮೂಹ ಹೀಗೆ ಅರ್ಧ ಮೈಯನ್ನು ತೋರಿಸುವ ಬಟ್ಟೆ ತೊಡುವ ಪಾಶ್ಚಾತ್ಯರನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ.

ಸ್ವಾಮಿಯವರು ಮಹಿಳೆಯ ಚಿತ್ರಣ ನೀಡುವಾಗ ತಾವು ಕಂಡ ಸಂದರ್ಭಗಳನ್ನು ನೇರವಾಗಿ ಚಿತ್ರಿಸುತ್ತಾರೆ; ಭಾರತದ ಸಂಸ್ಕೃತಿಯಲ್ಲಿನ ಸೀರೆ ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಹೇಗೆ ಅಲ್ಲಿನ ಮಹಿಳೆಯರನ್ನು ಆಕರ್ಷಿಸಿದೆ ಎಂಬುದನ್ನು ಹೇಳುತ್ತಾರೆ. ವ್ಯಂಗ್ಯದ ಮೂಲಕ ಪಾಶ್ಚಾತ್ಯ ಸಂಸ್ಕೃತಿಯನ್ನು ಟೀಕಿಸುತ್ತಾರೆ.

ಸಾರಾ ಅಬೂಬಕ್ಕರ್ ಅವರು ಮೂರ್ತಿರಾವ್ ಮತ್ತು ಬಿ.ಜಿ.ಎಲ್. ಸ್ವಾಮಿಯವರಿಗಿಂತ ಭಿನ್ನರಾಗಿ ಮಹಿಳೆಯ ಚಿತ್ರಣ ಕೊಡುತ್ತಾರೆ. ಅವರು ಮಹಿಳೆಯರ ಬಾಹ್ಯ ಚಟುವಟಿಕೆಗಳನ್ನಷ್ಟೇ ಹೇಳದೇ ಅವರ ಸಾಮಾಜಿಕ ಸಮಸ್ಯೆಗಳನ್ನು, ಅವರು ನಡೆಸುತ್ತಿರುವ ಹೋರಾಟಗಳನ್ನು ಸಹ ದಾಖಲಿಸುತ್ತಾರೆ. ಸಾರಾ ಮಹಿಳಾಪರ ಚಿಂತಕಿ ಹಾಗೂ ಲೇಖಕಿಯಾಗಿರುವುದರಿಂದ ಮಹಿಳಾ ಸಮಸ್ಯೆಗಳನ್ನು ಗುರುತಿಸಲು ಅವರಿಗೆ ಸಾಧ್ಯವಾಗಿದೆ. ಅಂತಹ ಸಮಸ್ಯೆಗಳು ಭಾರತದ ಮಹಿಳೆಯರ ಸಮಸ್ಯೆಗಳಿಗಿಂತ ಭಿನ್ನವಾಗಿವೆಯೋ ಅಥವಾ ಹಾಗೆಯೇ ಇವೆಯೋ ಎಂಬುದನ್ನು ಅವರು ಓದುಗರ ಗಮನಕ್ಕೆ ಬರುವಂತೆ ಮಾಡುತ್ತಾರೆ. ಮುಖ್ಯವಾಗಿ ಸಾರಾ ತಮ್ಮ ಪ್ರವಾಸ ಸಂದರ್ಭದಲ್ಲಿ ಅಮೆರಿಕನ್ ಮಹಿಳೆಯರ ಸಾಹಸವನ್ನು ಮೆಚ್ಚುತ್ತಾರೆ:

"ನಾವು ಹೋಗುತ್ತ ಒಂದೆಡೆ ಪೆಟ್ರೋಲ್ ಹಾಕಿಸಲು ನಿಂತಾಗ ದೊಡ್ಡ ಲಾರಿಯೊಂದನ್ನು ಚಲಾಯಿಸಿಕೊಂಡು ಹದಿಹರೆಯರಂತೆ ಕಾಣುವ ಹುಡುಗಿಯೊಬ್ಬಳು ಬಂದಳು. ಆ ಲಾರಿಯಲ್ಲಿ ಎಂಟು ಕುದುರೆಗಳಿದ್ದವು. ಆಕೆಯೊಬ್ಬಳೇ ಈ ಕುದುರೆಗಳನ್ನು ಕೆನಡಾಕ್ಕೆ ಒಯ್ಯುತ್ತಿದ್ದಳು. ಇಲ್ಲಿನ ಮಹಿಳೆಯರ ಈ ಸಾಹಸೀ ಪ್ರವೃತ್ತಿಯನ್ನು ಮೆಚ್ಚಲೇಬೇಕು'' (ಪು. ೮೫).

ಅಮೆರಿಕನ್ ಸಮಾಜದಲ್ಲಿ ಗಂಡು ಹೆಣ್ಣುಗಳನ್ನು ಸಮಾನರಾಗಿ ಕಾಣುತ್ತಾರೆ. ಮಹಿಳೆಯರಿಗೂ ಸಹ ಎಲ್ಲ ಕ್ಷೇತ್ರಗಳಲ್ಲಿ ದುಡಿಯುವ ಅವಕಾಶವಿದೆ. ಅವರು ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಪ್ರಯಾಣ ಮಾಡಲು ಅಂಜುವುದಿಲ್ಲ. ಇಲ್ಲಿ ಲೇಖಕಿ ಭಾರತದ ಮಹಿಳೆಯರೊಂದಿಗೆ ಹೋಲಿಸಿಕೊಂಡು ಆಶ್ಚರ್ಯಪಡುತ್ತಾರೆ. ಸಾರಾ ಅವರು ಅಮೆರಿಕದ ಮಹಿಳೆಯರ ಆಚರಣೆಗಳ ಹಿಂದೆ ಯಾವುದಾದರೂ ಒಂದು ಉದ್ದೇಶ ಇದ್ದೇ ಇರುತ್ತದೆ ಎಂಬುದನ್ನು ತಾವು ಕಂಡ ಸನ್ನಿವೇಶದ ಮೂಲಕ ಕಾಣಿಸುತ್ತಾರೆ.

ಕಥನದಲ್ಲಿ ಬರುವ ಮಹಿಳೆಯರು ತಾಯಂದಿರ ದಿನ ಆಚರಣೆಯನ್ನು ಆಚರಿಸುವ ವಿಧಾನ ಇದಕ್ಕೊಂದು ನಿದರ್ಶನವಾಗಿದೆ. ಆ ನಿದರ್ಶನ ಹೀಗಿದೆ :

"ಮೇ ತಿಂಗಳ ಹದಿನಾಲ್ಕರಂದು ಈ ದೇಶದಲ್ಲಿ ತಾಯಂದಿರ ದಿನವನ್ನು ಆಚರಿಸಲಾಗುತ್ತದೆ. ಪ್ರತಿ ತಂದೆಯೂ ಮಕ್ಕಳು ತಾಯಂದಿರಿಗಾಗಿ ಬಹುಮಾನಗಳನ್ನು ಹೂವುಗಳನ್ನು ಖರೀದಿಸಿ ತಾಯಂದಿರನ್ನು ಸಂತೋಷಿಸುತ್ತಾರೆ. ಈ ಬಾರಿಯ ಆಚರಣೆಯನ್ನು ಬೇರೊಂದು ರೀತಿಯಲ್ಲಿ ಆಚರಿಸಲು ಈ ದೇಶದ ತಾಯಂದಿರು ತೀರ್ಮಾನಿಸಿದ್ದರು. 'ಮಿಲಿಯ ತಾಯಂದಿರ ಮೆರವಣಿಗೆ' ಎಂಬುದು ಈ ಕಾರ್ಯಕ್ರಮದ ಹೆಸರು. ಈ ದೇಶದಲ್ಲಿ ಆಗಾಗ ನಡೆಯುವ ಕೋವಿ ಹಿಂಸೆಯನ್ನು ಪ್ರತಿಭಟಿಸಿ, ಅದರೆಡೆಗೆ ಸರ್ಕಾರದ ಗಮನ ಸೆಳೆಯಲು ಸಾವಿರಾರು ತಾಯಂದಿರು ಹಮ್ಮಿಕೊಂಡ ಕಾರ್ಯಕ್ರಮ ಇದಾಗಿತ್ತು" (ಪು. ೧೧೧).

ತಾಯಂದಿರ ದಿನದ ನೆನಪಲ್ಲಿ ಅಮೆರಿಕದಲ್ಲಿ ನಡೆಯುವ ಅಮಾಯಕರ ಚಿಕ್ಕಮಕ್ಕಳ ಕೊಲೆಗಳನ್ನು ನಿಲ್ಲಿಸುವಂತೆ ಅಲ್ಲಿನ ಮಹಿಳೆಯರು ಪ್ರತಿಭಟನೆ ನಡೆಸಿದ್ದನ್ನು ಲೇಖಕಿ ತಿಳಿಸುತ್ತಾರೆ. ಅಮಾಯಕರ ಕೊಲೆಗಳನ್ನು ತಡೆಯುವಲ್ಲಿ ಸರ್ಕಾರ ವಿಫಲವಾಗಿದ್ದು ಅದನ್ನು ಎಚ್ಚರಿಸಲು ಅಮೆರಿಕನ್ ಮಹಿಳೆಯರು ತಾಯಂದಿರ ದಿನವನ್ನು ಒಂದು ರೀತಿಯಲ್ಲಿ ಪ್ರತಿಭಟನೆಯ ದಿನವನ್ನಾಗಿಸಿಕೊಂಡಿದ್ದಾರೆ ಎಂದು ಲೇಖಕಿ ಮೆಚ್ಚುಗೆ ವ್ಯಕ್ತಪಡಿಸುತ್ತಾರೆ.

ಆದರೆ ಅಮೆರಿಕದಲ್ಲಿ ಕೂಡ ಭಾರತದಲ್ಲಿರುವಂತೆ ವರದಕ್ಷಿಣೆ. ಹಣಕ್ಕಾಗಿ ಮಹಿಳೆಯರ ಕೊಲೆ ಮಾಡುವುದು, ಹಳೆಯ ದ್ವೇಷದಿಂದ, ಮುಂಗೋಪದಿಂದ ಕೊಲ್ಲುವುದು ಕಂಡುಬರುತ್ತದೆ ಎಂಬುದನ್ನೂ ಸಹ ಲೇಖಕಿ ಕಾಣಿಸುತ್ತಾರೆ. ಎಳೆಯ ಮಕ್ಕಳನ್ನು ಎಳೆದುಕೊಂಡು ಹೋಗಿ ಕಾರಿನಲ್ಲಿ ಹಾಕಿಕೊಂಡೊಯ್ದು ಅತ್ಯಾಚಾರ ಮಾಡಿ ಬಳಿಕ ಕೊಲೆ ಮಾಡುವ ಕ್ರೂರಿಗಳೂ ಇದ್ದಾರೆ ಎಂಬ ಸಂಗತಿಯನ್ನು ಹೇಳುತ್ತಾರೆ.

ಗಂಡಂದಿರ ಹಿಂಸೆಯನ್ನು ತಾಳಿಕೊಂಡು ಆತನೊಡನೆ ಜೀವನ ನಡೆಸುವ ಮಹಿಳೆಯರೂ ಅಮೆರಿಕದಲ್ಲಿದ್ದಾರೆಂಬುದನ್ನೂ ಸಹ ಲೇಖಕಿ ಗುರುತಿಸುತ್ತಾರೆ. ಅದೇ ಸಂದರ್ಭದಲ್ಲಿ ಮೂರ್ತಿರಾವ್ ಮತ್ತು ಸ್ವಾಮಿಯವರು ಪುರುಷರಾದ ಕಾರಣ ಮಹಿಳೆಯರ ಬಾಹ್ಯ ಒಲವುಗಳನ್ನು ಚಿತ್ರಿಸುತ್ತಾರೆ. ಆದರೆ ಸಾರಾ ಅವರಿಗಿಂತ ಭಿನ್ನರಾಗಿ ಅಮೆರಿಕದ ಮಹಿಳೆಯರಿಗೂ ಸಮಸ್ಯೆಗಳಿವೆ; ಶ್ರೀಮಂತ ದೇಶವಾದರೂ ಸಹ ಅಲ್ಲಿ ಅತೃಪ್ತಿ ಕೊಲೆಗಳು ನಡೆಯುತ್ತವೆ ಎಂದು ಸಾಮಾಜಿಕ ವಾಸ್ತವಿಕತೆಯತ್ತ ಗಮನಹರಿಸುತ್ತಾರೆ.

## ೨.೪. ಮಾನವ ಸಂಬಂಧಗಳ ಚರ್ಚೆ

ಇತ್ತೀಚಿನ ದಿನಗಳಲ್ಲಿ ಆಧುನಿಕ ನಾಗರಿಕತೆಯಲ್ಲಿ ಮಾನವ ಸಂಬಂಧಗಳು ಕ್ಷೀಣವಾಗುತ್ತಿವೆ ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಕೆಲಸದ ಒತ್ತಡದಿಂದಾಗಿಯೊ, ವೈಯಕ್ತಿಕ ಬದುಕು ಸಾಗಿಸುವುದಕ್ಕಾಗಿಯೊ, ತಮ್ಮ ಬಂಧುಗಳಿಂದ ದೂರವಾಗುತ್ತ, ಅವರ ಮನುಷ್ಯ ಸಂಬಂಧಗಳಲ್ಲಿ ಒಂದು ಬಗೆಯ ಬಿರುಕು ಕಂಡು ಬರುತ್ತಿದೆ. ಅದರಲ್ಲೂ ಯಂತ್ರ ನಾಗರಿಕತೆಯಲ್ಲಿ ಬಹಳ ಮುಂದೆ ಹೋಗಿರುವ ಅಮೆರಿಕಾದ ಸಮಾಜದಲ್ಲಿ ಮಾನವ ಸಂಬಂಧಗಳು ಮತ್ತಷ್ಟು ಶಿಥಿಲವಾಗಿರುವುದು ಸಹಜ. ಈ ಕುರಿತ

ಕಾಳಜಿ ಅಮೆರಿಕ ಕುರಿತ ಪ್ರವಾಸ ಕಥನಗಳಲ್ಲಿ ತಪ್ಪದೇ ಕಾಣಿಸುತ್ತದೆ. ಮುಖ್ಯವಾಗಿ ತಂದೆ ತಾಯಿ ಹಾಗೂ ಮಕ್ಕಳ ಸಂಬಂಧಗಳಲ್ಲಿ, ಮನೆಗೆ ಅತಿಥಿಗಳನ್ನು ಆಹ್ವಾನಿಸುವಾಗ ಅಮೆರಿಕನ್ನರು ತೋರುವ ಔಪಚಾರಿಕ ಶಿಷ್ಟಾಚಾರಗಳಲ್ಲಿ ಇದು ಎದ್ದು ಕಾಣುತ್ತದೆ.

ಎ.ಎನ್. ಮೂರ್ತಿರಾವ್ ಅವರು ತಮ್ಮ ಪ್ರವಾಸ ಕಥನದಲ್ಲಿ ಅಮೆರಿಕನ್ನರ ಮಾನವ ಸಂಬಂಧಗಳು ಹದಗೆಟ್ಟಿರುವುದನ್ನು ಹೇಳುತ್ತಾರೆ. 'ನನ್ನ ಯಹೂದ್ಯ ಮಿತ್ರರು' ಎಂಬ ಅಧ್ಯಾಯದಲ್ಲಿ ೭೦-೭೫ ವರ್ಷದ ಮುದುಕಿಯೊಬ್ಬಳು ಒಂಟಿಯಾಗಿಯೇ ಜೀವಿಸಿರುವ ಪ್ರಸಂಗವಿದೆ. ಆ ಮುದುಕಿಗೆ ಮಕ್ಕಳಿದ್ದರೂ ಅವರೊಂದಿಗೆ ಕೂಡಿ ಇರುವ ಭಾಗ್ಯ ಇಲ್ಲವೆಂದು ಅವಳಿಂದಲೇ ತಿಳಿಯುತ್ತಾರೆ :

"ನ್ಯೂಯಾರ್ಕಿನಲ್ಲಿ ನಾನೊಬ್ಬಳೇ ಇದ್ದೇನೆ. ಮಕ್ಕಳೇನೋ ಇದ್ದಾರೆ; ಇಬ್ಬರೂ ಬಹಳ ಒಳ್ಳೆಯ ಹುಡುಗರು, ಒಬ್ಬ ಆಸ್ಟ್ರೇಲಿಯಾದಲ್ಲಿದ್ದಾನೆ. ಇನ್ನೊಬ್ಬ ಇಲ್ಲೇ ಅಲಬಾಮ್‌ನಲ್ಲಿದ್ದಾನೆ. ಅವರು ತಮ್ಮ ಕೆಲಸವನ್ನು ಬಿಟ್ಟು ನನ್ನನ್ನು ನೋಡಲು ಬರುವುದು ಕಷ್ಟ. ಸಾಧ್ಯವಾದಾಗ ಫೋನ್ ಮಾಡುತ್ತಾರೆ" (ಪು.೯೦).

ಮೇಲಿನ ಮಾತುಕತೆಯಿಂದ ಅಮೆರಿಕನ್ನರ ಖಾಸಗಿ ಬದುಕಲ್ಲಿ ಮಾನವ ಸಂಬಂಧಗಳು ಕಳಚಿ ಕೊಳ್ಳುತ್ತಿರುವುದು ಕಂಡುಬರುತ್ತದೆ. ಫೋನ್ ಮೂಲಕವೇ ತಾಯಿಯ ಯೋಗಕ್ಷೇಮ ವಿಚಾರಿಸುವ ಮಟ್ಟಕ್ಕೆ ಅಮೆರಿಕದಲ್ಲಿನ ತಾಯಿ ಮಕ್ಕಳ ಸಂಬಂಧಗಳು ತಲುಪಿವೆ. ಇದಕ್ಕೆ ಮುಖ್ಯವಾದ ಕಾರಣ ನಾಗರಿಕ ಜೀವನದಲ್ಲಿ ಜನರಿಗೆ ಇರದ ಬಿಡುವು, ಕೆಲಸದ ಒತ್ತಡ. ಅಮೆರಿಕನ್ನರಲ್ಲಿ ಮತ್ತು ಭಾರತೀಯರಲ್ಲಿ ಅತಿಥಿ ಸತ್ಕಾರದಲ್ಲಿರುವ ವ್ಯತ್ಯಾಸವನ್ನು ಲೇಖಕರು ಗುರುತಿಸುತ್ತಾರೆ.

"ಅಮೆರಿಕನ್ನರ ಮನೆಯಲ್ಲಿ ಅತಿಥಿಯಾಗಿರುವುದಕ್ಕೂ ಭಾರತದಲ್ಲಿ ನಮ್ಮ ಬಂಧುಮಿತ್ರರ ಮನೆಯಲ್ಲಿ ಅತಿಥಿಯಾಗುವುದಕ್ಕೂ ವ್ಯತ್ಯಾಸವಿದೆ. ಇವರಲ್ಲಿ ಬಂಧುಗಳು ನೋಡಬೇಕೆನ್ನಿಸಿದಾಗ ಅಥವಾ ಕೇವಲ ಯೋಗಕ್ಷೇಮ ವಿಚಾರಿಸಬೇಕೆನ್ನಿಸಿದಾಗ ಮೊದಲೇ ವರ್ತಮಾನ ಕೊಡದೇ ಯಾವಾಗ ಬೇಕಾದರೂ ಹೋಗುವಂತಿಲ್ಲ. ಫೋನ್ ಸೌಕರ್ಯ ಬಹಳ ಸುಲಭವಾದ್ದರಿಂದ ಫೋನ್ ಮಾಡಿ ಅವರ ಅನುಕೂಲ ತಿಳಿದುಕೊಳ್ಳುವುದು ಸಾಮಾನ್ಯ. ಆದರೆ ಒಬ್ಬರು ಮತ್ತೊಬ್ಬರ ಮನೆಯಲ್ಲಿ ನಾಲ್ಕು ದಿನ ಇರುವ ಉದ್ದೇಶವಿದ್ದರೆ, ಔತಣವಿಲ್ಲದೇ ಹೋಗುವುದು ಅಪರೂಪ. It is Just not done! ಅಂದರೆ ಹಾಗೆ ಮಾಡುವುದು ಅಸಭ್ಯತನ! ತಂದೆ ಮಕ್ಕಳು ಒಬ್ಬರ ಮನೆಗೊಬ್ಬರು ಹೋಗಿ ನಾಲ್ಕು ದಿನ ಇದ್ದು ಬರಬೇಕೆನ್ನಿಸಿದರೂ ಅವರು ಆಹ್ವಾನಕ್ಕಾಗಿ ಕಾಯುವುದು ಒಳ್ಳೆಯದು. ಒಂದು ವೇಳೆ ಕಾಯದಿದ್ದರೆ, ಮೊದಲೇ ಫೋನು ಮಾಡಿ, 'ನಾನು ಬರಲೆ'? ನಿನ್ನ ಅನುಕೂಲ ಹೇಗಿದೆ? ಯಾವತ್ತು ಬರಲಿ? ಎಂದು ಕೇಳಬೇಕು. ಎಷ್ಟು ದಿನ ಅಲ್ಲಿರಬಹುದೆಂಬುದನ್ನೂ ಮೊದಲೇ ನಿಶ್ಚಯಿಸಿಕೊಂಡಿರಬೇಕು" (ಪು. ೧೨೧).

ಮೇಲಿನ ಸನ್ನಿವೇಶವು ಅಮೆರಿಕದಲ್ಲಿನ ಮಾನವ ಸಂಬಂಧಗಳು ಹೇಗಿವೆ ಎಂಬುದನ್ನು ತಿಳಿಸುತ್ತದೆ. ಅತಿ ನಾಗರಿಕ ಬದುಕಿನಲ್ಲಿ ಜನ ತಮ್ಮ ಬಂಧುಬಾಧವರನ್ನೂ ಸಹ ದೂರ ಮಾಡಲು ಮುಂದಾಗುತ್ತಾರೆ

ಎಂಬುದು ತಿಳಿದುಬರುತ್ತದೆ. ಆದರೆ ಭಾರತದ ಕುಟುಂಬಗಳಲ್ಲಿ ಅಮೆರಿಕೆಯ ತರಹ ಮಾನವ ಸಂಬಂಧಗಳು ಔಪಚಾರಿಕವಾಗುವಷ್ಟು ಬದಲಾಗಿಲ್ಲ ಎನ್ನಬಹುದಾಗಿದೆ. ತೀರ ಹತ್ತಿರ ಸಂಬಂಧಿಗಳಾದ ತಂದೆ ಮಕ್ಕಳು ಕೂಡುವಿಕೆಗೆ ಮೊದಲೇ ದಿನಾಂಕ ನಿಗದಿಪಡಿಸಿದರೆ, ಇನ್ನು ದೂರದ ಸಂಬಂಧಿಗಳು ಯಾವ ಲೆಕ್ಕಕ್ಕಿಲ್ಲ ಎಂಬುದು ಅಮೆರಿಕದ ಮಾನವ ಸಂಬಂಧಗಳಿಂದ ತಿಳಿದುಬರುತ್ತದೆ.

ಅಮೆರಿಕದ ಮಾನವ ಸಂಬಂಧಗಳಲ್ಲಿ ಒಂದು ಬಗೆಯ ಶಿಥಿಲತೆಯಿದೆ. ಅವರು ವೈಯಕ್ತಿಕ ಬದುಕನ್ನು ನಡೆಸಲು ಇಚ್ಛಿಸುವುದರಿಂದಲೂ ಅವರ ಕೌಟುಂಬಿಕ ಸಂಬಂಧಗಳು ಸಡಿಲಗೊಂಡಿವೆ ಎನ್ನಬಹುದಾಗಿದೆ. ಮುಖ್ಯವಾಗಿ ಅವರು ನಿರ್ವಹಿಸುವ ಕೆಲಸದ ಒತ್ತಡ ಅವರನ್ನು ಹಾಗೆ ಇರುವಂತೆ ಮಾಡಿದೆ.

ಬಿ.ಜಿ.ಎಲ್. ಸ್ವಾಮಿಯವರು ಮಾನವ ಸಂಬಂಧಗಳ ಬಗೆಗೆ ತಮ್ಮ ಪ್ರವಾಸ ಕಥನದಲ್ಲಿ ಹೆಚ್ಚಾಗಿ ಚರ್ಚಿಸುವುದಿಲ್ಲ. ಸ್ವಾಮಿಯವರು ಅಮೆರಿಕೆಗೆ ವಿಶ್ವವಿದ್ಯಾಲಯದ ಆವರಣದಲ್ಲಿ ವಿದ್ಯಾಭ್ಯಾಸ ಮಾಡಲು ಹೋದ ಕಾರಣ ಅಮೆರಿಕದ ಸಮಾಜದ ಬಗೆಗೆ ತಿಳಿಯಲು ಅವರಿಗೆ ಹೆಚ್ಚು ಸಾಧ್ಯವಾಗದೇ ಇರಬಹುದು. ಅವರು ತಮಗೆ ಕಂಡ ಸುತ್ತಮುತ್ತಲಿನ ಪರಿಸರದ ವಿದ್ಯಮಾನಗಳನ್ನು ಪ್ರವಾಸ ಕಥನದಲ್ಲಿ ಹೆಚ್ಚು ಚಿತ್ರಿಸುತ್ತಾರೆ. ಅಪರಿಚಿತರನ್ನು ಅಮೆರಿಕದಲ್ಲಿ ಯಾವುದೇ ಕಾರಣಕ್ಕೂ ಮಾತನಾಡಿಸುವುದಿಲ್ಲ ಎಂಬುದನ್ನು ಲೇಖಕರಿಗಾದ ಒಂದು ಅನುಭವದ ಮೂಲಕ ನೋಡಬಹುದಾಗಿದೆ.

"ಬಾಸ್ಟನ್ನಿನ ಸೌತ್ ಎಂಡ್ ಹರವಿನಲ್ಲಿ ಒಂದು ಸಲ ಬಸ್ಸಿಗೆ ಕಾದಿದ್ದೆ. ಜತೆಯಲ್ಲಿ ಮುದುಕಿಯೊಬ್ಬಳು ನಿಂತಿದ್ದಳು. ನಾನು ವಾಸಿಸುತ್ತಿದ್ದ ಜಾಗಕ್ಕೆ ಕೊಂಡೊಯ್ಯುವ ಬಸ್ಸು ನಿಲ್ದಾಣದಲ್ಲಿಯೇ ಇದ್ದೇನೋ ಎಂಬ ಸಂದೇಹ ಹುಟ್ಟಿ ಇವಳನ್ನು 'ಕೇಂಬ್ರಿಡ್ಜಗೆ ಹೋಗುವ ಬಸ್ಸು ಇಲ್ಲಿ ಬರುತ್ತದೆಯೇ" ಎಂದು ವಿನಯದಿಂದ ಭಿನ್ನಯಿಸಿದೆ. ನನ್ನನ್ನು ಹುಲ್ಲು ಕಡ್ಡಿಗಿಂತ ಕಡೆ ಎಂಬಂತೆ ಓರೆನೋಟ ಹೊರಳಿಸಿ 'Young Man' ಅಪರಿಚಿತರನ್ನು ಹೀಗೆಲ್ಲ ಮಾತನಾಡಿಸಬಾರದೆಂದು ಗೊತ್ತಿಲ್ಲವೋ? ಅಗತ್ಯವಿದ್ದರೆ ಎದುರು ಅಂಗಡಿಗೆ ಹೋಗು. ಅಲ್ಲಿ ಬಾಸ್ಟನ್ನಿನ ಮ್ಯಾಪ್ ಮಾರುತ್ತಾರೆ. ಒಂದನ್ನು ಕೊಂಡುಕೊಂಡು ಸಂಶಯ ನಿವಾರಣೆ ಮಾಡಿಕೊ!" (ಪು. ೧೧೯).

ಲೇಖಕರ ಈ ಅನುಭವದಿಂದ ಅಮೆರಿಕನ್ನರು ಯಾವುದೇ ರೀತಿಯ ಅಪರಿಚಿತ ವ್ಯಕ್ತಿಗಳೊಂದಿಗೆ ಸಂಬಂಧ ಬೆಳೆಸಲು ಸಿದ್ಧರಿರುವುದಿಲ್ಲ ಎಂಬುದು ತಿಳಿಯುತ್ತದೆ. ಏಕೆಂದರೆ ಅಲ್ಲಿ ಅಮಾಯಕರಂತೆ ವರ್ತಿಸಿ ಮೋಸಗೊಳಿಸುವರೆಂಬ ಭೀತಿಯಿಂದ ಯಾವುದೇ ರೀತಿಯಲ್ಲಿ ಪ್ರತಿಕ್ರಿಯಿಸದೆ ಮೌನಕ್ಕೆ ಶರಣಾಗುತ್ತಾರೆ. ಇಲ್ಲದಿದ್ದಲ್ಲಿ ಪರಿಹಾರ ತಂತ್ರವನ್ನು ಹುಡುಕಿ ಕೊಡುತ್ತಾರೆ. ಆದರೆ ಭಾರತದ ಪ್ರವಾಸದಲ್ಲಿ ಜನರು ಒಂದಲ್ಲ ಒಂದು ಕಾರಣಕ್ಕೆ ಮಾತನಾಡುತ್ತ ಸಮೀಪದ ಸಂಬಂಧಿಗಳಂತೆ ವರ್ತಿಸುವುದನ್ನು ಕಾಣುತ್ತೇವೆ. ಆದರೆ ಪ್ರಭುಶಂಕರ್ ಅವರು ತಮ್ಮ ಪ್ರವಾಸ ಕಥನದಲ್ಲಿ ವಿದೇಶಿ ಮಹಿಳೆಯರು ಆಪ್ತರಾಗಿ ಮಾತಾಡುತ್ತಾರೆ ಎಂಬುದನ್ನು ದಾಖಲಿಸುತ್ತಾರೆ. ಅವರೇ ಹೇಳುವಂತೆ : ವಿದೇಶಿಯರು ಅದರಲ್ಲೂ ಅಮೆರಿಕನ್ನರಾದರೆ

ಮಾತನಾಡಿಸುವುದು ಸಲಭ ಹೆಂಗಸರಾಗಲಿ ಗಂಡಸರಾಗಲಿ ಅವರೇ ಮೊದಲು ಮಾತನಾಡಿಸುತ್ತಾರೆ. ಇಲ್ಲ ನಾವು ಮಾತನಾಡಿಸಿದರೆ ತುಂಬ ಸೌಜನ್ಯದಿಂದ ಉತ್ತರ ಕೊಡುತ್ತಾರೆ. ಇದು ಸ್ವಾಮಿಯವರು ಅಲ್ಲಿನ ಸಮಾಜದೊಡನೆ ಆಪ್ತವಾಗಿ ಬೆರೆತಿರುವುದಿಲ್ಲ ಎಂಬುದನ್ನು ತಿಳಿಸುತ್ತದೆ.[೬] ಸ್ವಾಮಿಯವರಿಗೆ ವಿಶ್ವವಿದ್ಯಾಲಯವೆ ಕಾರ್ಯಕ್ಷೇತ್ರ. ಹಾಗಾಗಿ ಅಲ್ಲಿನ ಚಿತ್ರಣಗಳನ್ನೆ ಹೆಚ್ಚಾಗಿ ಕೊಡುತ್ತಾರೆ.

ಸಾರಾ ಅಬೂಬಕ್ಕರ್ ಅವರು 'ಐಷಾರಾಮದ ಆಳದಲ್ಲಿ' ಮಾನವ ಸಂಬಂಧಗಳ ಕುರಿತು ಮಾತನಾಡುತ್ತಾರೆ. ಅವರು ಭಾರತದಲ್ಲಿರುವಂತೆ ಅಮೆರಿಕದಲ್ಲೂ ಸಹ ಸಂಬಂಧಗಳು ಗಟ್ಟಿಯಾಗಿಯೆ ಇವೆ ಎಂಬುದನ್ನು ಹೇಳುತ್ತಾರೆ. 'ಅಮೆರಿಕನ್ನರ ಕೌಟುಂಬಿಕ ಬದುಕು ಸುಖಕರವಾಗಿಲ್ಲ ಎಂಬ ಕಲ್ಪನೆ ಸಾಮಾನ್ಯವಾಗಿ ಇದೆ. ಆದರೆ ಅಮೆರಿಕನ್ನರ ಕುಟುಂಬಗಳಲ್ಲೂ ಸಹ ಪ್ರೀತಿ ಬಾಂಧವ್ಯ ಇದೆ. ಅವರು ಮಕ್ಕಳ ಕಾಲೇಜು ಶಿಕ್ಷಣಕ್ಕಾಗಿ ಮಕ್ಕಳು ಹುಟ್ಟಿನಿಂದಲೇ ನಿಧಿ ಕೂಡಿಡುತ್ತಾರೆ' ಎನ್ನುವ ಬಗ್ಗೆ ಲೇಖಕಿ ಗಮನ ಸೆಳೆಯುತ್ತಾರೆ. ಅಮೆರಿಕನ್ನರೂ ಸಹ ಸೊಸೆ ಅಥವಾ ಮಗಳ ಹೆರಿಗೆಗೆ ನಮ್ಮಂತೆಯೇ ತಾಯಿ ಅಥವಾ ಅತ್ತೆ ಬಂದು ನೆರವಾಗುತ್ತಾರೆ ಎಂದು ಸ್ತ್ರೀಪರ ಕಾಳಜಿಯ ಲೇಖಕಿ ಸಾರಾ ಹೇಳುತ್ತಾರೆ. ಅವರು ಬಂಧುಬಾಂಧವರ ಪ್ರೀತಿ ಎಂತಹುದು ಎಂಬುದನ್ನು ದಾಖಲಿಸುವ ಒಂದು ಭಾಗ ಹೀಗಿದೆ :

"ನಾವು ಒಂದು ಮನೆಗೆ ಹೋದಾಗ ಆ ದಂಪತಿಗಳು ಆಸ್ಪತ್ರೆಗೆ ಹೋಗುವ ತರಾತುರಿಯಲ್ಲಿದ್ದರು. 'ನಮಗೆ ನಿನ್ನೆ ಒಂದು ಮೊಮ್ಮಗು ಹುಟ್ಟಿದೆ. ನಿನ್ನೆ ಅದನ್ನು ನೋಡಿ ಬಂದಿದ್ದೇವೆ. ನಮಗೆ ಅದನ್ನು ನೋಡಿದಷ್ಟೂ ಸಾಕಾಗುವುದಿಲ್ಲ. ಈಗ ಪುನಃ ನಾವು ಅಲ್ಲಿಗೆ ಹೊರಟಿದ್ದೇವೆ' ಎಂದರು ಎನ್ನುತ್ತಾ ನೆತ್ತರ ಬಾಂಧವ್ಯ ನಮ್ಮಂತೆಯೆ ಅಮೆರಿಕದಲ್ಲಿಯೂ ಬಿಗಿಯಾಗಿಯೇ ಇದೆ. ಐವತ್ತು ವರ್ಷಗಳ ದಾಂಪತ್ಯ ಜೀವನ ನಡೆಸಿದವರ ವಿವರ ತಿಳಿಸಲೆಂದೇ ಪತ್ರಿಕೆಗಳಲ್ಲಿ ಕಾಲಂಗಳಿವೆ. ಇಂತಹ ವೃದ್ಧ ದಂಪತಿಗಳು ಮೊಮ್ಮಕ್ಕಳೊಡನೆ ಪಾರ್ಕುಗಳಲ್ಲಿ ಹಾಗೂ ವ್ಯಾಪಾರಿ ಮಳಿಗೆಗಳಲ್ಲಿ ಕಣ್ಣಿಗೆ ಬೀಳುತ್ತಾರೆ. ಇವರು ಪರಸ್ಪರ ತುಂಬಾ ಸ್ನೇಹ ಮತ್ತು ಹೊಂದಾಣಿಕೆಯಿಂದ ಬದುಕುತ್ತಾರೆ. ಪರಸ್ಪರ ಸಹಕರಿಸುವ ಆ ದಂಪತಿಗಳ ಅನ್ಯೋನ್ಯತೆ ಕಂಡಾಗ ನಮ್ಮೆದೆ ತುಂಬಿ ಬರುತ್ತದೆ" (ಪು. ೧೬೦).

ಈ ಮಾತುಗಳನ್ನು ಗಮನಿಸಿದಾಗ ಅಮೆರಿಕನ್ನರಲ್ಲಿಯೂ ಬಾಂಧವ್ಯ, ಸಂಬಂಧಗಳ ಬಗೆಗೆ ಪ್ರೀತಿ, ವಾತ್ಸಲ್ಯ ಇದೆ ಎಂಬುದು ತಿಳಿದುಬರುತ್ತದೆ. ಅಮೆರಿಕನ್ ಕುಟುಂಬಗಳೂ ಸಹ ಮೊಮ್ಮಕ್ಕಳ ಮೇಲೆ ಪ್ರೀತಿ ವಾತ್ಸಲ್ಯ ಇಟ್ಟುಕೊಂಡಿವೆ. ಮಕ್ಕಳಿಗೆ ಇಷ್ಟವಾದ ಸಾಮಗ್ರಿಗಳನ್ನು ಕೊಡಿಸುವುದರ ಮೂಲಕ ಮಾನವ ಸಂಬಂಧಗಳು ಹತ್ತಿರ ಇವೆ ಎಂಬುದನ್ನು ಲೇಖಕಿ ಮನಗಾಣಿಸುತ್ತಾರೆ.

ಒಟ್ಟಾರೆಯಾಗಿ ಮೂವರು ಲೇಖಕರು ಅಮೆರಿಕೆಯಲ್ಲಿನ ಮಾನವ ಸಂಬಂಧಗಳನ್ನು ತಾವು ಕಂಡಂತೆ ಕಥನಗಳಲ್ಲಿ ಚರ್ಚಿಸಿದ್ದಾರೆ. ಅಮೆರಿಕದ ಜನರು ತಾವು ಬೇರೆಯವರನ್ನು ಕಾಣುವ ದೃಷ್ಟಿಕೋನ ಎಂತಹುದು ಎಂಬುದು ಇದರಿಂದ ತಿಳಿಯುತ್ತದೆ. ಅಮೆರಿಕನ್ನರ ಮಾನವ ಸಂಬಂಧಗಳು ಹದಗೆಡುತ್ತಿವೆ ಎಂದು ಮೂರ್ತಿರಾವ್ ಅವರು ಗುರುತಿಸಿದರೆ, ಸ್ವಾಮಿಯವರು ಅಮೆರಿಕನ್ನರು ಯಾವುದೇ ಸಂಬಂಧಗಳನ್ನು

ಬೆಳೆಸಲು ಸಿದ್ಧರಿರುವುದಿಲ್ಲ ಎಂಬುದನ್ನು ಹೇಳುತ್ತಾರೆ. ಆದರೆ ಸಾರಾ ಭಾರತದಲ್ಲಿರುವಂತೆಯೇ ಅಮೆರಿಕೆಯ ಕುಟುಂಬಗಳಲ್ಲೂ ಸಹ ಪ್ರೀತಿ ವಿಶ್ವಾಸಗಳಿವೆ. ಆದ್ದರಿಂದ ಅವರ ಸಂಬಂಧಗಳು ಗಟ್ಟಿಯಾಗಿವೆ ಎಂಬುದನ್ನು ಸೂಚಿಸುತ್ತಾರೆ. ಮಹಿಳೆಯಾದ ಕಾರಣದಿಂದಲೋ ತಮ್ಮ ಮಕ್ಕಳ ಮನೆಗೆ ಹೋದ ಕಾರಣದಿಂದಲೋ ಸಾರಾ ಅವರಿಗೆ ಅಮೆರಿಕದಲ್ಲಿರುವ ಮಾನವೀಯ ಸಂಬಂಧಗಳ ಬಗ್ಗೆ ಹೆಚ್ಚು ಇತ್ಯಾತ್ಮಕವಾಗಿ ಗಮನಿಸಲು ಹಾಗೂ ಬರೆಯಲು ಸಾಧ್ಯವಾಗಿದೆ. ಮೂವರೂ ಲೇಖಕರು ಅಮೆರಿಕೆಗೆ ಹೋದ ಸಂದರ್ಭ, ಕಾಲ, ಬೇರೆಯಾಗಿರುವುದರಿಂದ ಅವರಲ್ಲಿ ಒಂದೇ ವಿಷಯದ ಗ್ರಹಿಕೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ.

## ೨.೫. ಧಾರ್ಮಿಕ ಆಚರಣೆಗಳ ಚರ್ಚೆ

ಧರ್ಮವೆಂಬುದು ಪ್ರತಿಯೊಂದು ದೇಶದ ಸಮಾಜದಲ್ಲಿ ವ್ಯಾಪಿಸಿಕೊಂಡಿರುವಂತಹ ಸಾಂಸ್ಕೃತಿಕವಾಗಿ ಮಹತ್ವದ ಸಂಗತಿಯಾಗಿದೆ. ಧರ್ಮವು ನಿರ್ಮಿಸಿಕೊಂಡಿರುವ ನಂಬಿಕೆ, ನಿಯಮ ಹಾಗೂ ಆಚರಣೆಗಳು ಸಮಾಜದಲ್ಲಿ ತಮ್ಮದೇ ಆದ ಪ್ರಭಾವವನ್ನು ಬೀರುತ್ತವೆ. ಧಾರ್ಮಿಕ ಸಂಗತಿಗಳು ಒಂದು ದೇಶಕ್ಕಿಂತ ಮತ್ತೊಂದು ದೇಶದಲ್ಲಿ ಭಿನ್ನತೆಯನ್ನು ಹೊಂದಿರುತ್ತವೆ. ಅಂತಹ ಭಿನ್ನತೆಗಳನ್ನು ಪ್ರವಾಸ ಕಥನಗಳು ಮುಖ್ಯವಾಗಿ ಗಮನಿಸಿವೆ. ಪಾಶ್ಚಾತ್ಯ ಸಂಸ್ಕೃತಿಯೊಳಗೆ ಬರುವ ಕ್ರೈಸ್ತ ಧರ್ಮದಲ್ಲಿನ ವಿಚಾರಗಳು ಭಾರತದ ಧಾರ್ಮಿಕ ಅಂಶಗಳಿಗಿಂತ ಹೇಗೆ ಭಿನ್ನವಾಗಿವೆ ಎನ್ನುವ ಬಗ್ಗೆ ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳಲ್ಲಿ ತಿಳಿಸುವ ಪ್ರಯತ್ನ ನಡೆದಿದೆ.

ಮೂರ್ತಿರಾವ್ ಅವರು 'ಅಪರವಯಸ್ಕನ ಅಮೆರಿಕಯಾತ್ರೆ'ಯಲ್ಲಿ ಧಾರ್ಮಿಕ ಸಂಗತಿಗಳ ಬಗ್ಗೆ ತಮ್ಮ ವಿಚಾರಗಳನ್ನು ಮಂಡಿಸುತ್ತಾರೆ. ಅಮೆರಿಕ ಮತ್ತು ಭಾರತದ ಧಾರ್ಮಿಕ ಆಚರಣೆಗಳ ಬಗೆಗೆ ಚರ್ಚಿಸುವಾಗ ಲೇಖಕರು ಶ್ರೇಷ್ಠ-ಕನಿಷ್ಠ ಎಂದು ಮೌಲ್ಯಮಾಪನ ಮಾಡುವುದಿಲ್ಲ. ಅವರು ಎಲ್ಲ ಧರ್ಮಗಳಲ್ಲಿ ಸಮಾನ ಮನೋಭಾವವನ್ನು ಹೊಂದಿರುವ ಕಾರಣ ಈ ತರತಮದ ಮೌಲ್ಯಮಾಪನ ಮಾಡುವುದಿಲ್ಲ. ಅವರು ಧಾರ್ಮಿಕತೆಯ ವಿಷಯಗಳಲ್ಲಿ ಒಂದು ಬಗೆಯ ತಟಸ್ಥ ನಿಲುವನ್ನು ತಳೆದಂತೆ ತೋರುತ್ತಾರೆ. ಇದು ಮೂರ್ತಿರಾವ್ ಅವರ ವಿಶಿಷ್ಟ ಮನೋಭಾವವನ್ನು ತಿಳಿಸುತ್ತದೆ.

ಸಾಮಾನ್ಯವಾಗಿ ಜನರಿಗೆ ತಮ್ಮ ದೇಶ, ಧರ್ಮ, ಭಾಷೆ, ಜನಾಂಗಗಳಂತಹ ಭಾವನಾತ್ಮಕ ಸಂಗತಿಗಳ ಮೇಲೆ ಅಭಿಮಾನ ಇರುತ್ತದೆ. ಅಂತಹ ಅಭಿಮಾನ ಹೊರದೇಶಗಳಲ್ಲಿ ಹೋದಾಗ ದ್ವಿಗುಣಗೊಳ್ಳುತ್ತದೆ ಎನ್ನಬಹುದು. ಮೂರ್ತಿರಾವ್ ಅವರು ಸ್ವದೇಶದ ಧಾರ್ಮಿಕ ಆಚರಣೆಗಳನ್ನು ತಮ್ಮ ಪ್ರವಾಸ ಕಥನದ ಉದ್ದಕ್ಕೂ ಉಲ್ಲೇಖಿಸುತ್ತಾರೆ.

"ಕರ್ನಾಟಕದ ಗಣಪತಿ ಮಂಗಳಾರತಿಯ ನೆನಪು ತಂದ ಈ ಹಳೆಯ ಕಾಲದ ಚರಪು ನನಗೆ ಯಾವ ಪಂಚಭಕ್ಷ್ಯಪರಮಾನ್ನಕ್ಕಿಂತ ಹಿತವಾಗಿತ್ತು. ಅಲ್ಲಿಂದ ಬಂದವರು ಸುಮಾರು ೪೦-೪೫ ಜನ. ಎಲ್ಲರೂ ಅರ್ಧ ಗಂಟೆ ಭಜನೆ ಮಾಡಿದರು. ಯಾರೋ ಒಬ್ಬಾಕೆ ಪುರಂದರದಾಸರ ಕೃತಿಯೊಂದನ್ನು ಇಂಪಾಗಿ ಹಾಡಿದಳು. ಭಜನೆಯಾದ ಮೇಲೆ ಕೆಲವು ಶ್ಲೋಕಗಳ ಪಠನವಾಯಿತು. 'ವಸುದೇವ ಸುತಂ

ದೇವಂ' ಎಂಬುದರಿಂದ ಮೊದಲು ಮಾಡಿಕೊಂಡು ಪ್ರತಿ ಶ್ಲೋಕದ ಕೊನೆಯಲ್ಲೂ 'ಕೃಷ್ಣ ವಂದೇ ಜಗದ್ಗುರುಂ' ಎಂದು ಹೇಳುವ ಪರಿಪಾಠ" (ಪು. ೧೩).

ಮೂರ್ತಿರಾವ್ ಅವರು ಉಲ್ಲೇಖ ಮಾಡುವ ಅಮೆರಿಕದಲ್ಲಿನ 'ಭಾರತೀಯ' ಆಚರಣೆಯೆಲ್ಲ ಬ್ರಾಹ್ಮಣ ಮಧ್ಯಮ ವರ್ಗದ ಆಚರಣೆಯಾಗಿದೆ. ಅಲ್ಲಿನ ಶ್ಲೋಕಗಳು, ಪೂಜಿಸಲ್ಪಡುವ ದೇವರು - ಇವೆಲ್ಲ ಸಂಗತಿಗಳು ಅಮೆರಿಕೆಯಲ್ಲಿ ಉಳಿದುಕೊಂಡಿರುವ ಮತ್ತು ಅಮೆರಿಕೆಗೆ ಹೋಗುತ್ತಿರುವ ಜನರ ಸಾಮಾಜಿಕ ಸ್ವರೂಪವನ್ನು ತಿಳಿಸುತ್ತವೆ. ಹೆಚ್ಚಾಗಿ ಅಮೆರಿಕೆಗೆ ವಲಸೆ ಹೋಗುತ್ತಿರುವ ಉಚ್ಚ ಜಾತಿಯ ಮಧ್ಯಮ ವರ್ಗದ ಜನರ ಆಚರಣೆಗಳ ಬಗ್ಗೆ (ಲೇಖಕರೂ ಸಹ ಮಧ್ಯಮ ವರ್ಗಕ್ಕೆ ಸೇರಿದವರಾದುದರಿಂದ) ಆಪ್ತವಾದ ಚಿತ್ರಣ ನೀಡಲು ಸಾಧ್ಯವಾಗಿದೆ.

ಲೇಖಕರು 'ನನ್ನ ಯಹೂದ್ಯ ಮಿತ್ರರು' ಎಂಬ ಅಧ್ಯಾಯದಲ್ಲಿ ಸ್ಕಿನರ್ ಎಂಬುವವರೊಡನೆ ಧಾರ್ಮಿಕ ವಿಷಯಗಳ ಚರ್ಚೆಯಲ್ಲಿ ತೊಡಗುವ ಪ್ರಸಂಗವಿದೆ. ಸ್ಕಿನರ್ ಅವರು ಕ್ರೈಸ್ತ ಧರ್ಮದ ಬಗೆಗೆ, ಬೈಬಲ್ ಬಗೆಗೆ, ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಕೆಲವು ಕ್ರೈಸ್ತ ಧರ್ಮದ ಉನ್ನತ ಮೌಲ್ಯಗಳನ್ನು ನೆನಪಿಸಿಕೊಳ್ಳುತ್ತಾರೆ. ಅದೇ ಹೊತ್ತಿಗೆ ಲೇಖಕರೂ ಸಹ ಹಿಂದೂಧರ್ಮದ ರಾಮಾಯಣ ಮಹಾಭಾರತಗಳಲ್ಲಿ ಇರುವ ಜೀವನದ ಉನ್ನತ ಮೌಲ್ಯಗಳ ಬಗ್ಗೆ ಹೇಳುತ್ತಾರೆ. ಸ್ಕಿನರ್ ಇದಕ್ಕೆ ವಿರೋಧಿಸದೆ 'ಹಿಂದೂ ಧರ್ಮವನ್ನು ತಾನು ಹೆಚ್ಚು ತಿಳಿದುಕೊಂಡಿಲ್ಲ' ಎಂದು ಒಪ್ಪಿಕೊಳ್ಳುತ್ತಾರೆ. ಆದರೆ ಮೂರ್ತಿರಾವ್ ಅವರು ಬೈಬಲ್‌ನಲ್ಲಿರುವ ಬಹುತೇಕ ಜೀವನ ಮೌಲ್ಯಗಳು ಹಿಂದೂಧರ್ಮದಲ್ಲೂ ಇವೆ ಎಂದು ಹೇಳುವಾಗ ಕ್ರೈಸ್ತ ಧರ್ಮದ ಬಗೆಗೆ ಅವರಿಗೆ ಇರುವ ತಿಳುವಳಿಕೆಯನ್ನು ಇದು ತಿಳಿಸುತ್ತದೆ. ಲೇಖಕರು ಇಂಗ್ಲಿಷ್ ಅಧ್ಯಾಪಕರಾಗಿರುವುದರಿಂದ, ಆ ಸಾಹಿತ್ಯದ ಮೂಲಕ ಕ್ರೈಸ್ತ ಧರ್ಮದ ಬಗೆಗೆ ತಿಳಿದುಕೊಳ್ಳಲು ಅವರಿಗೆ ಸಾಧ್ಯವಾಗಿದೆ.

ಬಿ.ಜಿ.ಎಲ್. ಸ್ವಾಮಿಯವರೂ ತಮ್ಮ ಪ್ರವಾಸ ಕಥನದಲ್ಲಿ ಧಾರ್ಮಿಕ ಜಗತ್ತುಗಳ ಬಗೆಗೆ ಚಿಂತಿಸುತ್ತಾರೆ. ಅವರ ಕೃತಿಯಲ್ಲಿ 'ಮತ ಪ್ರಚಾರದ ವೈಖರಿ' ಎಂಬ ಅಧ್ಯಾಯವು ಸಂಪೂರ್ಣವಾಗಿ ಧಾರ್ಮಿಕ ಸಂಗತಿಗಳಿಗೆ ಸಂಬಂಧಿಸಿದ್ದಾಗಿದೆ. ಇದರಲ್ಲಿ ಲೇಖಕರು ಅಮೆರಿಕ ಮತ್ತು ಭಾರತದ ಧಾರ್ಮಿಕ ಆಚರಣೆಗಳನ್ನು ತುಲನೆ ಮಾಡುತ್ತಾರೆ. ಧಾರ್ಮಿಕ ಆಚರಣೆಗಳನ್ನು ವ್ಯಂಗ್ಯದಲ್ಲಿ ನಿರೂಪಿಸುವುದರ ಮೂಲಕ ಎರಡೂ ದೇಶಗಳ ಧಾರ್ಮಿಕ ವ್ಯವಸ್ಥೆಯನ್ನು ಪರೋಕ್ಷವಾಗಿ ವಿಮರ್ಶಿಸುತ್ತಾರೆ. ಅಮೆರಿಕದಲ್ಲಿ ಮತಪ್ರಚಾರಕ್ಕಾಗಿ ಕಸರತ್ತುಗಳು ಸದಾ ಪ್ರಚಾರಕರಿಂದ ನಡದೇ ಇರುತ್ತದೆ ಎಂದು ಹೇಳುವ ಲೇಖಕರು ಬೈಬಲ್‌ನ ಒಂದು ವ್ಯಾಖ್ಯಾನವನ್ನು ಉದಾಹರಣೆಯಾಗಿ ಕಥನದಲ್ಲಿ ದಾಖಲಿಸುತ್ತಾರೆ. ಅದು ಹೀಗಿದೆ :

"ಆರು ದಿನ ಕಷ್ಟಪಟ್ಟು ಕಾರ್ಯೋನ್ಮುಖನಾಗಿ ನಿನ್ನ ಕೆಲಸಗಳನ್ನು ಮಾಡಿಕೊ ಆದರೆ ಏಳನೆ ದಿನ ನಿನ್ನ ದೇವನ ಪಾರಾಯಣ. ಆ ದಿನ ನಾನಾವ ಕೆಲಸವನ್ನೂ ಮಾಡಬೇಕಾಗಿದ್ದಿಲ್ಲ ಎಂದು ಬೈಬಲ್‌ನ ಉವಾಚಕ್ಕೆ ಅಲ್ಲಿಯೇ ವ್ಯಾಖ್ಯಾನ ನೀಡಲಾಗಿತ್ತು. ಸೋಮವಾರದಿಂದ ಶನಿವಾರ ಪೂರ್ತಿ ನಿನ್ನ ವೃತ್ತಿಯಲ್ಲಿ

ತೊಡಗಿರುವೆ, ಹೀಗಾಗಿ ಸುಖಾನುಭವಕ್ಕೆ ನಿನಗೆ ವೇಳೆಯೇ ಸಿಕ್ಕವುದಿಲ್ಲ. ಅಲ್ಲದೆ, ಕಾರ್ಯೋನ್ಮುಖವಾಗಿರುವಾಗ ಕುಡಿಯುವುದು ಕೆಟ್ಟದ್ದು. ನೀತಿಬಾಹಿರವಾದದ್ದು. ಆದರೆ ಭಾನುವಾರ ಜೀವನ ಸುಖಾನುಭವಕ್ಕೆ ನಿನಗೆ ಹಕ್ಕಿದೆ; ನಮ್ಮ ಭಗವದ್ಗೀತೆಗೂ ಇದೇ ತೆರನಾಗಿ ಆಧುನಿಕ, ಲೌಕಿಕ ದೃಷ್ಟಿಯಿಂದ ಯಾರಾದರೂ ವ್ಯಾಖ್ಯಾನ ಬರೆದರೆ ನಮ್ಮ ದೇಶದ ವ್ಯಾಪಾರಿಗಳಿಗೆ ಇನ್ನಷ್ಟು ಅನುಕೂಲವಾಗುತ್ತಿತ್ತು" (ಪು. ೬೨).

ಮುಖ್ಯವಾಗಿ ಧರ್ಮದ ವ್ಯಾಖ್ಯಾನಗಳು ಜನರ ಉಪಯುಕ್ತತೆಯನ್ನು ಅವಲಂಬಿಸಿ ಹುಟ್ಟುತ್ತವೆ. ಅಮೆರಿಕದ ಧರ್ಮಪ್ರಸಾರದಲ್ಲಿ ವ್ಯವಹಾರಿಕ ದೃಷ್ಟಿಕೋನವಿರುವುದನ್ನು ಲೇಖಕರು ಕಂಡಿದ್ದಾರೆ. ವಾರದಲ್ಲಿ ರಜೆಯ ದಿನವಷ್ಟೇ ಐಹಿಕ ಸುಖ ಅನುಭವಿಸಲು ಯಾವುದೇ ತೆರನಾದ ಅಡೆತಡೆಗಳಿಲ್ಲ. ರಜ ದಿನ ಬಿಟ್ಟು ಉಳಿದ ದಿನಗಳಲ್ಲಿ ದುಶ್ಚಟ ಮಾಡಿದರೆ ದೇಶದ ಆರ್ಥಿಕತೆಗೆ ಕುಂದುಂಟಾಗುತ್ತದೆ. ಜನ ಮದ್ಯವ್ಯಸನಿಗಳಾಗ ದಂತಿರಲು ಧರ್ಮಗಳು ಇಂತಹ ತಂತ್ರ ಹುಡುಕಿಕೊಂಡಿವೆ ಎಂಬುದನ್ನು ಲೇಖಕರು ಗ್ರಹಿಸುತ್ತಾರೆ. ಲೇಖಕರು ಬೈಬಲ್‌ನ ವ್ಯಾಖ್ಯಾನವನ್ನು ಭಗವದ್ಗೀತೆಯೊಂದಿಗೆ ಹೋಲಿಸಿ ವ್ಯಂಗ್ಯ ಮಾಡುವುದು, ಭಾರತೀಯ ಮತ್ತು ಪಾಶ್ಚಾತ್ಯ ಧಾರ್ಮಿಕ ವ್ಯವಸ್ಥೆಗಳೆರಡರ ಬಗೆಗೆ ಇರುವ ಅವರ ವಿಮರ್ಶಕ ಮನೋಭಾವವನ್ನು ತಿಳಿಸುತ್ತದೆ.

ಕ್ರೈಸ್ತರ ಹಬ್ಬದ ಆಚರಣೆಗಳು ಅಮೆರಿಕನ್ನರ ಅನುಕೂಲ ಉಪಭೋಗಗಳಿಗೆ ತಕ್ಕಂತೆ ಬೇರೆ ಅರ್ಥ ಪಡೆದುಕೊಂಡಿವೆ ಎಂಬುದನ್ನು ಲೇಖಕರು ಕಥನದಲ್ಲಿ ಉಲ್ಲೇಖಿಸುತ್ತಾರೆ.

"ಅಮೆರಿಕದಲ್ಲಿ ಕ್ರಿಸ್‌ಮಸ್ ಹಬ್ಬದ ಆಚರಣೆಗೂ ಕ್ರೈಸ್ತ ಮತಕ್ಕೂ ಯಾವ ಸಂಬಂಧವೂ ಇಲ್ಲ. ಆ ದಿನ ಅಮೆರಿಕನ್ನರು ಆಚರಿಸುವುದು ಲೋಕೋದ್ಧಾರಕರಲ್ಲೊಬ್ಬನಾದ ಯೇಸು ಕ್ರಿಸ್ತನ ಜನ್ಮ ದಿನವನ್ನಲ್ಲ; ಸಾಂಪ್ರದಾಯಿಕವಾಗಿ ಬಂದಿರುವ ಕ್ರಿಸ್‌ಮಸ್ ಟರ್ಕಿಯ ಗೌರವಾರ್ಥವಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ಟರ್ಕಿ ಎಂಬುದು ಕೋಳಿ ಜಾತಿಗೆ ಸೇರಿದ ಪಕ್ಷಿ ವಿಶೇಷ. ಯುಗಾದಿಯ ದಿನ ನಾವು ಹೋಳಿಗೆ ತಿನ್ನುವ ಸಂಪ್ರದಾಯಕ್ಕೆ ಶರಣು ಬಿದ್ದಿರುವಂತೆ; ಕ್ರೈಸ್ತ ಹುಟ್ಟಿದ ದಿನ ಇವರು ಟರ್ಕಿ ಕೋಳಿಯನ್ನು ತಿಂದು ತೇಗಬೇಕೆಂಬ ಸಂಪ್ರದಾಯಕ್ಕೆ ಕಟ್ಟುಬಿದ್ದಿದ್ದಾರೆ" (ಪು. ೬೫).

ಕ್ರಿಸ್‌ಮಸ್ ಆಚರಣೆಯು ಪಾಶ್ಚಾತ್ಯರಿಗೆ ಟರ್ಕಿ ಕೋಳಿ ಸೇವಿಸುವುದಕ್ಕಾಗಿ ಹುಟ್ಟಿಕೊಂಡರೆ, ಭಾರತದಲ್ಲಿ ಯುಗಾದಿಯು ಹೋಳಿಗೆ ತಿನ್ನಲು ಹುಟ್ಟಿಕೊಂಡಿದೆ ಎಂದು ಲೇಖಕರು ಅಭಿಪ್ರಾಯ ಪಡುತ್ತಾರೆ. ತಮ್ಮ ನಿಷ್ಠದ ನಿಲುವುಗಳನ್ನು ಧಾರ್ಮಿಕ ವಿಷಯಗಳಲ್ಲೂ ಸಹ ಸಡಿಲಗೊಳಿಸದೆ ನೇರವಾಗಿ ಹೇಳಿರುವುದು ಲೇಖಕರ ದಿಟ್ಟ ಮನೋಭಾವವನ್ನು ತಿಳಿಸುತ್ತದೆ. ಜಾತ್ಯಾತೀತ ಮನೋಭಾವದ ಸಾರಾ ಅವರಿಗೆ ಧರ್ಮ ಮುಖ್ಯವಲ್ಲ. ದಲಿತರಿಗೆ ಮಹಿಳೆಯರಿಗೆ ಯಾವ ಬಗೆಯಲ್ಲಿ ನಡೆಸಿಕೊಳ್ಳುತ್ತಾರೆಂಬುದು ಮುಖ್ಯ. ಆದ್ದರಿಂದ ಅವರು ಅಮೆರಿಕೆಯ ಜಾತ್ಯಾತೀತ ಸಮಾಜವನ್ನು ಮೆಚ್ಚುತ್ತಾರೆ.

"ಅಮೆರಿಕದಲ್ಲಿ ಜಾತೀಯತೆ, ಧರ್ಮಾಂಧತೆ ಎಂಬುದಿಲ್ಲ. ಯಾರು ಯಾವ ಮತಾವಲಂಬಿಯೂ ಆಗಬಹುದು. ಮತಾಂತರಕ್ಕೆ ಯಾವ ತಡೆಯೂ ಇಲ್ಲ ಅಥವಾ ಆ ಕುರಿತು ಯಾರೂ ತಲೆಕೆಡಿಸಿಕೊಳ್ಳುವುದೂ

ಇಲ್ಲ. ಚರ್ಚು ಕೆಡವಿಸಿದ್ದು ಯಾರು? ಮಂದಿರ ಕೆಡವಿ ಮಸೀದಿ, ಮಸೀದಿ ಕೆಡವಿ ಮಂದಿರ ಮುಂತಾದ ಯಾವ ಚರ್ಚೆಗಳಿಗೂ ಅಲ್ಲಿ ಅವಕಾಶವೇ ಇಲ್ಲ. ಯಾವ ಧರ್ಮದವನೇ ಆದರೂ ಆ ನೆಲದ ನಿಯಮಾನುಸಾರ ಬದುಕಬೇಕು. ಇಸ್ಲಾಂ ಧರ್ಮಾನುಯಾಯಿಗಳಾದರೂ ಬಹುಪತ್ನಿತ್ವ ಬಾಯಿಮಾತಿನ ತಲಾಖ್ ಮುಂತಾದವು ಸಾಧ್ಯವಿಲ್ಲ. ವಿಚ್ಛೇದಿತ ಪತ್ನಿಗೆ ನ್ಯಾಯಾಲಯ ವಿಧಿಸುವ ಜೀವನಾಂಶ ನೀಡಲೇಬೇಕು. ವಿಚ್ಛೇದನಗೊಂಡಾಗ ಮನೆ, ಹೆಂಡತಿ ಮಕ್ಕಳ ಪಾಲಾಗುತ್ತದೆ. ಗಂಡ ಹೊರ ನಡೆಯಬೇಕು. ಮಕ್ಕಳಿಗೆ ಹದಿನೆಂಟು ವರ್ಷ ಪ್ರಾಯವಾಗುವವರೆಗೆ ಗಂಡ ಜೀವನಾಂಶ ನೀಡಬೇಕು. ಧರ್ಮಕ್ಕನುಸಾರವಾದ ವ್ಯಕ್ತಿ ನಿಯಮ ಇಲ್ಲವೇ ಇಲ್ಲ (ಪು. ೧೬೪).

ಸಾರಾ ಅವರು ಮೇಲಿನ ಮಾತುಗಳಲ್ಲಿ ಇರುವ ಸ್ತ್ರೀಪರ ಮನೋಭಾವನೆಯನ್ನು ಗಮನಿಸಬೇಕು. ಅವರು ಹಿಂದೂಧರ್ಮದ ಮಂದಿರ, ಮುಸ್ಲಿಂ ಧರ್ಮದ ಮಸೀದಿ, ಕ್ರೈಸ್ತ ಧರ್ಮದ ಚರ್ಚು-ಈ ಮೂರು ಧರ್ಮಗಳ ಬಗೆಗೆ ಚರ್ಚಿಸುತ್ತಾರೆ. ಏಕಕಾಲದಲ್ಲಿ ಅನೇಕ ಧರ್ಮಗಳ ಬಗ್ಗೆ ಮೌಲ್ಯಮಾಪನ ಮಾಡುವಾಗ ಅವರು ನ್ಯಾಯಪರ ಹಾಗೂ ಜಾತ್ಯಾತೀತರಾಗಿ ಕಂಡುಬರುತ್ತಾರೆ. ಅಮೆರಿಕಾ ಕೂಡ ಜಾತ್ಯಾತೀತ ದೇಶವಾಗಿದೆ ಎಂಬುದು ಸಾರಾ ಅವರಿಗೆ ಅಭಿಮಾನದ ವಿಷಯ. 'ಮಂದಿರ ಕೆಡವಿ ಮಸೀದಿ, ಮಸೀದಿ ಕೆಡವಿ ಮಂದಿರ' ಎಂಬ ಮಾತಲ್ಲಿ ಭಾರತದಲ್ಲಿ ನಡೆದಿರುವ ಕೋಮುವಾದಿ ದುಷ್ಪರಿಣಾಮಗಳ ಕಹಿ ನೆನಪು ಕಾಣಿಸಿದೆ. ಅಷ್ಟೇ ಅಲ್ಲದೆ, ಲೇಖಕಿಗೆ ಭಾರತದ ಮಹಿಳೆಯರ ಶೋಚನೀಯ ಸ್ಥಿತಿಗೆ ಹೋಲಿಸಿದರೆ ಅಮೆರಿಕನ್ ಧರ್ಮಗಳಲ್ಲಿ ಪರಿಸ್ಥಿತಿ ಉತ್ತಮವಾಗಿವೆ ಎಂದು ಅನಿಸಿದೆ. ಸ್ತ್ರೀಪರ ಕಾಳಜಿ ಇರುವ ಸಾರಾ ಅವರು ಅಮೆರಿಕನ್ ಧಾರ್ಮಿಕ ವ್ಯವಸ್ಥೆಯಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ಕಾಳಜಿಯಿಂದ ಗುರುತಿಸುತ್ತಾರೆ.

ಮುಖ್ಯವಾಗಿ ಧಾರ್ಮಿಕ ಆಚರಣೆಗಳ ಚರ್ಚೆಯಲ್ಲಿ ಮೂವರೂ ಲೇಖಕರು ಭಿನ್ನರಾಗಿ ಕಂಡುಬರುತ್ತಾರೆ. ಮೂರ್ತಿರಾವ್ ಅವರು ಧಾರ್ಮಿಕ ವ್ಯವಸ್ಥೆಗಳ ಬಗೆಗೆ ಹೇಳುವಾಗ ಯಾವುದೇ ಕಟು ಟೀಕೆ ಮಾಡದೇ ಭಾರತ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳಲ್ಲಿನ ಆಚರಣೆಗಳನ್ನು ಸಮಾನ ಅಂಶಗಳನ್ನು ಉದಾರವಾದಿ ಮನೋಭಾವದಿಂದ ಚಿತ್ರಿಸುತ್ತಾರೆ. ಬಿ.ಜಿ.ಎಲ್. ಸ್ವಾಮಿಯವರು ಭಾರತ ಮತ್ತು ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಬರುವ ಧಾರ್ಮಿಕ ಆಚರಣೆಗಳೆರಡನ್ನು ಹಾಸ್ಯ ವಿಡಂಬನೆಗಳ ಮೂಲಕ ಟೀಕಿಸುತ್ತಾರೆ. ಆದರೆ ಸಾರಾ ಅಬೂಬಕ್ಕರ್ ಅವರು, ಇವರಿಬ್ಬರಿಗಿಂತಲೂ ಭಿನ್ನರಾಗಿ ಧಾರ್ಮಿಕ ವಿಚಾರದ ಚರ್ಚೆಯನ್ನು ಮಾಡುತ್ತಾರೆ. ಧರ್ಮಗಳು ಯಾವುದೇ ಮತಾಂತರಕ್ಕೆ ಅಡ್ಡಪಡಿಸುವುದಿಲ್ಲವೆಂದೂ, ಅಮೆರಿಕದಲ್ಲಿ ಜಾತೀಯತೆ ಧರ್ಮಾಂಧತೆ ಎಂಬುದಿಲ್ಲ ಎಂದು ಸಂತೋಷದಿಂದ ಕಥನದಲ್ಲಿ ದಾಖಲಿಸುತ್ತಾರೆ. ಲೇಖಕರ ವಿಭಿನ್ನ ದೃಷ್ಟಿಕೋನಗಳು ಒಂದು ದೇಶದ ಸಂಸ್ಕೃತಿಯ ಒಂದೇ ಅಂಶದ ಬಗ್ಗೆ ಭಿನ್ನಭಿನ್ನವಾಗಿ ಕೆಲಸ ಮಾಡುವುದನ್ನು ಇಲ್ಲಿ ಕಾಣಬಹುದು.

## ೨.೬. ಶಿಕ್ಷಣದ ಬಗೆಗಿನ ಚರ್ಚೆ

ಸಾಮಾನ್ಯವಾಗಿ ಪ್ರವಾಸ ಕಥನಗಳು ಲೇಖಕರು ಕಂಡ ಮನಸ್ಸಿಗೆ ಆನಂದ ಕೊಡುವಂತಹ ಮಾಹಿತಿ, ಸಂಗತಿಗಳನ್ನು ಚಿತ್ರಿಸುತ್ತವೆ. ಅವುಗಳಲ್ಲಿ ಗಂಭೀರವಾದ ಚಿಂತನೆ ಇರುವುದಿಲ್ಲ ಎಂಬ ಗ್ರಹಿಕೆ ಇದೆ. ಇದು ನಿಜ ಕೂಡ. ಆದರೆ ಸೃಜನಶೀಲ, ಚಿಂತನಶೀಲ, ಲೇಖಕರ ಪ್ರವಾಸ ಕಥನಗಳು ಈ ಗ್ರಹಿಕೆಯನ್ನು ಹುಸಿ ಮಾಡುತ್ತವೆ. ಅವು ಒಂದು ದೇಶದ ಸಂಸ್ಕೃತಿಯ ಸಮಸ್ತ ಚಿತ್ರಣವನ್ನು ಒಳಗೊಳ್ಳಲು ಹವಣಿಸುತ್ತ, ಆ ದೇಶದ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ - ಹೀಗೆ ಅನೇಕ ಕ್ಷೇತ್ರಗಳ ಅರಿವನ್ನು ಒಳಗೊಳ್ಳಲು ಯತ್ನಿಸುತ್ತವೆ. ತಮ್ಮ ಪ್ರವಾಸ ಕಥನಗಳಲ್ಲಿ ಲೇಖಕರು ಅಮೆರಿಕದ ಶೈಕ್ಷಣಿಕ ಚಟುವಟಿಕೆಗಳನ್ನು ಹೇಗೆ ಗಮನಿಸುತ್ತಾರೆ ಎಂಬುವುದನ್ನು ಈ ಭಾಗದಲ್ಲಿ ನೋಡಬಹುದಾಗಿದೆ.

ಮೂರ್ತಿರಾವ್ ಅವರು ಅಮೆರಿಕದ ಶಿಕ್ಷಣ ಸಂಸ್ಥೆಗಳಲ್ಲಿ ಬೋಧಿಸುವ ವಿಷಯಗಳ ಬಗೆಗೆ ಮುಕ್ತ ವಾತಾವರಣದಲ್ಲಿ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳ ಬಗೆಗೆ ಕುತೂಹಲವುಳ್ಳವರು. ವಿದ್ಯಾರ್ಥಿಗಳ ಮನೋಭಾವಕ್ಕೆ ತಕ್ಕಂತೆ ಶಿಕ್ಷಣ ನೀಡುವ ಅಲ್ಲಿನ ಖಾಸಗಿ ವಿದ್ಯಾಸಂಸ್ಥೆಗಳಿಗೆ ವಿಶ್ವವಿದ್ಯಾಲಯಗಳ ಮಾನ್ಯತೆ ಇರುತ್ತದೆ. ಅನೇಕ ಶಾಸ್ತ್ರಗಳ ಜೊತೆಗೆ ಮಾನವಿಕಗಳನ್ನು ಲಲಿತಕಲೆಗಳನ್ನೂ ಸಹ ಅಮೆರಿಕನ್ ಶಿಕ್ಷಣ ವ್ಯವಸ್ಥೆಯಲ್ಲಿ ಕಲಿಸಲಾಗುತ್ತದೆ ಎಂಬುದನ್ನು ಲೇಖಕರು ಮೆಚ್ಚುತ್ತಾರೆ. ಅಲ್ಲಿನ ಶಿಕ್ಷಣ ಸಂಸ್ಥೆಗಳಲ್ಲಿ ಬೆಳೆಸಿರುವ ಗಿಡಮರಗಳನ್ನು ನಿಸರ್ಗದ ಪರಿಸರದಲ್ಲಿ ನಡೆಯುವ ಮುಕ್ತವಾದ ಅಧ್ಯಯನ ಕ್ರಮವನ್ನು ಮೆಚ್ಚುತ್ತಾರೆ. ಲೇಖಕರು ಮೆಚ್ಚುವ ಒಂದು ನೋಟ ಹೀಗಿದೆ :

"ಅಲ್ಲಿ ಗಣಿತ, ವಿಜ್ಞಾನ, ಅಮೆರಿಕನ್‌ಇತಿಹಾಸ, ಮೊದಲಾದ ವಿಷಯಗಳನ್ನು ಬೋಧಿಸುತ್ತಾರಾದರೂ ಚಿತ್ರಕಲೆ, ಲೋಹ ಶಿಲ್ಪ, ಸಂಗೀತ ಮುಂತಾದ ಲಲಿತಕಲೆಗಳಿಗೆ ಪ್ರಾಶಸ್ತ್ಯ. ಅಲ್ಲಿ ಇತ್ತ ಕಾಡಿನ ವೃಕ್ಷ ಸಂಪತ್ತು, ಅತ್ತ ನಗರದ ನೈರ್ಮಲ್ಯ ವ್ಯವಸ್ಥೆ ಸೌಲಭ್ಯಗಳು ಎರಡೂ ಇವೆ. ಅಲ್ಲಲ್ಲೇ ಮರದ ಬುಡಕ್ಕೆ ಒರಗಿಕೊಂಡು ಯುವಕರು ಓದುತ್ತಿರುತ್ತಾರೆ. ಚಿತ್ರ ಬರೆಯುತ್ತಾರೆ. ಸಂಗೀತ ಅಭ್ಯಾಸ ಮಾಡುತ್ತಾರೆ. ಮಿಷಿಗನ್ ಸರೋವರದಲ್ಲಿ ನೀರಾಟವಾಡುತ್ತಿರುತ್ತಾರೆ. ಇವೆಲ್ಲ ಚಟುವಟಿಕೆಗಳಿಗೆ ಹಿನ್ನೆಲೆಯಾಗಿ ಅಲೆಗಳ ಸತತವಾದ ಮರ್ಮರ ಶಬ್ದ ಪ್ರಶಾಂತವಾದ ನೆಳಲು ವಾತಾವರಣ ೩೦೦೦ ವರ್ಷಗಳ ಹಿಂದಿನ ಯಾವುದೋ ಋಷ್ಯಾಶ್ರಮಕ್ಕೆ ಬಂದೆನೋನೋ ಎನಿಸಿತು. ನಾನು ಒಂದು ಮರವನ್ನೊರಗಿಕೊಂಡು ಕುಳಿತೆ. ನನ್ನ ಅರಿವಿಲ್ಲದೆ ನನಗೂ ಬಹಳ ಆಯಾಸವಾಗಿದ್ದಿರಬೇಕು. ಕುಳಿತ ಒಂದೆರಡು ನಿಮಿಷಗಳಲ್ಲೇ ನನ್ನ ಪ್ರಯತ್ನವಿಲ್ಲದೆ ದೇಹದ ಬಿಗುವು ತಾನಾಗಿಯೇ ಇಳಿದು ಹೋಯಿತು. ಇಂದ್ರಿಯಗಳು ತಮ್ಮ ಕರ್ತವ್ಯವನ್ನು ಮರೆತವು. ಯೋಚನೆಗಳೆಲ್ಲ ಎಲ್ಲಿಗೋ ಓಡಿ ಹೋಗಿ ಮನಸ್ಸನ್ನು ತೆರವು ಮಾಡಿದವು. ನಿದ್ದೆ ಬರದಿದ್ದರೂ ವಿಚಿತ್ರವಾದ ಬೇರೊಂದು ಸ್ಥಿತಿ ಬಂತು" (ಪು. ೧೩೫).

ಮೂರ್ತಿರಾವ್ ಅವರು ಅಮೆರಿಕದ ಶಿಕ್ಷಣ ವ್ಯವಸ್ಥೆಯ ಬಗ್ಗೆ ಹೊಗಳುವಾಗ ಭಾರತದಲ್ಲಿ ಇಂತಹ ವ್ಯವಸ್ಥೆ ಇಲ್ಲದಿರುವುದಕ್ಕೆ ನೇರವಾಗಿ ಖೇದ ವ್ಯಕ್ತಪಡಿಸುವುದಿಲ್ಲ. ಅಮೆರಿಕದ ಶಿಕ್ಷಣ ಸಂಸ್ಥೆಗಳು

ನಿಸರ್ಗ ಪರಿಸರದಲ್ಲಿ ತಮ್ಮ ಚಟುವಟಿಕೆ ನಡೆಸುವುದನ್ನು ಋಷ್ಯಾಶ್ರಮಕ್ಕೆ ಹೋಲಿಸುತ್ತಾರೆ. ಆದರೆ ಲೇಖಕರು ತಮ್ಮ ಕಲ್ಪನೆಯ ಭಾರತದ ಗತಕಾಲದ ಋಷ್ಯಾಶ್ರಮಗಳು, ಅಮೆರಿಕದಂತೆ ಎಲ್ಲ ಜಾತಿ ವರ್ಗದವರನ್ನು ಸೇರಿಸಿಕೊಂಡಿದ್ದವೇ ಎಂಬ ಪ್ರಶ್ನೆಯನ್ನು ಹಾಕಿಕೊಂಡಂತೆ ಕಾಣುವುದಿಲ್ಲ.

ಮುಖ್ಯವಾಗಿ ಅಮೆರಿಕದ ಶೈಕ್ಷಣಿಕ ಪರಿಸರದಲ್ಲಿನ ನಿಸರ್ಗವು ಮೂರ್ತಿರಾವ್ ಅವರಿಗೆ ಅನುಭಾವಿಕ ಸ್ಥಿತಿಗೆ ಒಯ್ಯುತ್ತದೆ. ಆಲೋಚನೆಗಳಿಲ್ಲದೆ ಲೌಕಿಕದ ವ್ಯವಹಾರಗಳಿಂದ ಅಲೌಕಿಕದೆಡೆಗೆ ಲೇಖಕರು ಹೋಗುವುದಕ್ಕೂ ಇಲ್ಲಿ ಬರುವ ಋಷ್ಯಾಶ್ರಮದ ಹೋಲಿಕೆಗೂ ಆಂತರಿಕ ಸಂಬಂಧವಿದೆ. ವಿದೇಶದಲ್ಲಿ ತಾನಿದ್ದೇನೆ ಎಂದು ಮರೆತು ಅಮೆರಿಕದಲ್ಲಿಯೇ ತಮ್ಮ ದೇಶದ ಪರಂಪರೆಯ ಸಂಗತಿಗಳನ್ನು ಹುಡುಕುವುದು, ಅವುಗಳೊಂದಿಗೆ ತನ್ಮಯವಾಗುವುದು ಲೇಖಕರಲ್ಲಿ ಕಾಣುತ್ತೇವೆ. ಲೇಖಕರು ಪರದೇಶ, ಭಾಷೆ, ಸಂಸ್ಕೃತಿ ಇವುಗಳನ್ನು ಮೀರುವ ದೃಷ್ಟಿಕೋನದಲ್ಲಿ ಉದಾರ ಮಾನವತಾವಾದಿ ನೆಲೆಯಲ್ಲಿ ಚಿಂತಿಸುತ್ತಾರೆ. ಇದರಿಂದ ಯಾವುದೇ ವ್ಯಕ್ತಿ ಎಂತಹ ಆಧುನಿಕ ಪರಿಸರದಲ್ಲಿದ್ದರೂ ತಮ್ಮ ಮೂಲ ಪರಿಸರದ ಚಟುವಟಿಕೆಗಳೊಂದಿಗೆ ಹೋಲಿಸಿ ತನ್ನತನವನ್ನು ಅದರಲ್ಲಿ ಕಾಣಲು ಇಚ್ಛಿಸುತ್ತಾನೆ ಎಂಬುದು ಮನದಟ್ಟಾಗುತ್ತಾನೆ.

ವೃತ್ತಿಯಿಂದ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಮೂರ್ತಿರಾವ್ ಅವರು ಚಿಕ್ಕಮಕ್ಕಳ ಶಿಕ್ಷಣಕ್ಕಿಂತ ಕಾಲೇಜು ಶಿಕ್ಷಣದ ಬಗ್ಗೆ ಹೆಚ್ಚು ಚಿಂತಿಸುತ್ತಾರೆ. ಬಿಡುವಿಲ್ಲದ ಪ್ರಯಾಣದ ಮಧ್ಯೆಯೂ ಒಂದು ಕಾಲೇಜಿನ ವಾತಾವರಣದಲ್ಲಿ ಸಂತೋಷಿಸುವ ಅವರು ತಮ್ಮ ಆಯಾಸ ಪರಿಹಾರವಾಯಿತೆಂದು ಹೇಳಿಕೊಳ್ಳುತ್ತಾರೆ. ಇದು ಅವರು ಶಿಕ್ಷಣದ ಜತೆ ಇರಿಸಿಕೊಂಡಿರುವ ಕಾಳಜಿ ವೃತ್ತಿ ಗೌರವ ಮತ್ತು ರಮ್ಯ ಮನೋಭಾವನೆಯನ್ನು ಹೊಂದಿರುವುದರ ಸಂಕೇತವಾಗಿದೆ.

ಒಟ್ಟಾರೆಯಾಗಿ ಮೂರ್ತಿರಾವ್ ಅವರು ಅಮೆರಿಕನ್ ಶಿಕ್ಷಣ ಪದ್ಧತಿಯಲ್ಲಿ ವಿದ್ಯಾರ್ಥಿಗಳ ಇಚ್ಛಾನುಸಾರದ ಜೊತೆಗೆ ಸಂಗೀತ ಚಿತ್ರಕಲೆ ಮುಂತಾದವುಗಳನ್ನು ಕಲಿಸುತ್ತಾರೆಂಬುದನ್ನು ಮೆಚ್ಚುತ್ತಾರೆ. ಹಲವಾರು ಸಂಗತಿಗಳನ್ನು ಭಾರತದೊಡನೆ ತುಲನೆ ಮಾಡುವ ಲೇಖಕರು ಶಿಕ್ಷಣದ ಸಾಮಾಜಿಕ ವ್ಯವಸ್ಥೆಯಲ್ಲಿ ಇರುವ ತಾರತಮ್ಯಗಳನ್ನು ತುಲನೆ ಮಾಡುವುದಿಲ್ಲ. ಹಾಗೆ ತುಲನೆ ಮಾಡದೇ ಇರುವುದು ಲೇಖಕರು ಭಾರತದ ಶಿಕ್ಷಣ ವ್ಯವಸ್ಥೆಯ ಬಗ್ಗೆ ಇರಿಸಿಕೊಂಡಿರುವ ಅವಿಮರ್ಶಾತ್ಮಕ ಧೋರಣೆಯೇ ಕಾರಣ ಎನ್ನಬಹುದು.

ಬಿ.ಜಿ.ಎಲ್. ಸ್ವಾಮಿಯವರು ಮೂರ್ತಿರಾವ್ ಅವರಿಗಿಂತ ಭಿನ್ನ ನೆಲೆಯಲ್ಲಿ ಶೈಕ್ಷಣಿಕ ಚರ್ಚೆ ಮಾಡುತ್ತಾರೆ. ಮೂರ್ತಿರಾವ್ ಅವರು ಅಮೆರಿಕದ ಶಿಕ್ಷಣ ವ್ಯವಸ್ಥೆಯಲ್ಲಿನ ನಿಸರ್ಗ ಪರಿಸರವನ್ನು ಮೆಚ್ಚಿಕೊಂಡರೆ, ಸ್ವಾಮಿಯವರು ವಿಶ್ವವಿದ್ಯಾಲಯಗಳ ವಿದ್ಯಾರ್ಥಿ ಸಮುದಾಯದಲ್ಲಿರುವ ಆಚರಣೆಗಳನ್ನು ಕೊಂಚ ತಮಾಷೆಯಿಂದ ಕಾಣುತ್ತಾರೆ. ತಮಗೆ ಪ್ರಾಮಾಣಿಕವಾಗಿ ಅನಿಸಿದ್ದನ್ನು ಹೇಳುವ ವ್ಯಕ್ತಿ ಸ್ವಾತಂತ್ರ್ಯವುಳ್ಳ ಲೇಖಕರಾದ ಸ್ವಾಮಿಯವರು ಶಿಕ್ಷಣದ ಚರ್ಚೆಯಲ್ಲಿ ಇದನ್ನು ಕಾಣಿಸುತ್ತಾರೆ. "ನಮ್ಮಂತೆಯೇ ಅವರು ಅವರಂತೆಯೇ ನಾವು" ಎಂಬುದನ್ನು ನಂಬುವ ಅವರು ಅಮೆರಿಕದ ವಿದ್ಯಾರ್ಥಿಗಳಲ್ಲಿ ವಾದ ವಿವಾದ

ಸ್ವಾಭಿಮಾನ ಪೈಪೋಟಿ ಸ್ಪರ್ಧೆ ಇದ್ದೇ ಇರುತ್ತದೆ ಎನ್ನುವುದನ್ನು ಚಿತ್ರಿಸುತ್ತಾರೆ. ಸಾಮಾನ್ಯವಾಗಿ ತಮ್ಮ ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರಯೋಧರ ಘಟನಾವಳಿಗಳನ್ನು ಸ್ಮರಿಸುವ ಆಚರಣೆಗಳು ಹಲವು ದೇಶಗಳಲ್ಲಿ ಇವೆ. ಅದೇ ರೀತಿ ಅಮೆರಿಕದಲ್ಲಿ ಸ್ವಾತಂತ್ರ್ಯ ದಿನಾಚರಣೆಯನ್ನು ಪಾಲ್‌ರಿವೀರ್ ಎಂಬ ವೀರನ ಕುದುರೆಯನ್ನು ನಿಲ್ಲಿಸುವ ಆಚರಣೆಯನ್ನಾಗಿ ಆಚರಿಸುತ್ತಾರೆ. ಹಾರವರ್ಡ್ ಮತ್ತು ರ್‍ಯಾಡ್‌ಕ್ಲಿಫ್ ವಿದ್ಯಾರ್ಥಿಗಳ ಮಧ್ಯೆ ನಡೆಯುವ ಅಂತಹ ಆಚರಣೆಯು ಹೀಗಿದೆ :

"ರ್‍ಯಾಡ್‌ಕ್ಲಿಫ್ ಕಾಲೇಜು ಹುಡುಗಿಯರದು. ಹಾರವರ್ಡ್ ಕಾಲೇಜು ಹುಡುಗರದು. ಸರ್ವೇ ಸಾಮಾನ್ಯವಾಗಿ ಎರಡು ಗುಂಪುಗಳಿಗೂ ಎಲ್ಲ ವಿಷಯಗಳಲ್ಲೂ ಎಲ್ಲ ಕಾಲದಲ್ಲೂ ವಾದವಿವಾದ ವಿನೋದ ಕಲಹ ತಾವೇ ಸರಿ ಎಂಬ ಸ್ವಾಭಿಮಾನ, ಪೈಪೋಟಿ ಹುಡುಗರಿಗೆ ಹುಡುಗಿಯರನ್ನು ಕಂಡರೆ ಒಂದು ಬಗೆಯ ತಾತ್ಸಾರ; ಹುಡುಗಿಯರಿಗೆ ಹುಡುಗರನ್ನು ಕಂಡರೆ ಅಪಹಾಸ್ಯ. ಹುಡುಗಿಯರದು ತಾವೇನು? ಯಾರಿಗೆ ಕಡಿಮೆ ಎಂಬ ಪ್ರತಿಷ್ಠೆ. ಇವರು ತಮಗಿಂತಲೂ ಕಡಿಮೆ ಎಂಬ ಸತ್ಯವನ್ನು ಸಿದ್ಧಾಂತ ಮಾಡಬೇಕಾಗಿಯೇ ಇಲ್ಲವೆಂಬ ಮೊಂಡುವಾದ ಹುಡುಗರದು. ಹೇಳಿಕೊಟ್ಟ ಪಾಠವನ್ನು ಗಿಣಿಯಂತೆ ಕಲಿಯುತ್ತಾರೆ. ಮಾಡಿ ತೋರಿಸಿದುದನ್ನು ಕಪಿಯಂತೆ ಅನುಕರಿಸುತ್ತಾರೆ. ನಮ್ಮ ಕಲ್ಪನಾ ಸ್ಫೂರ್ತಿಯಿಂದ ಉದಯಿಸಿದ ಅಭಿಪ್ರಾಯಗಳನ್ನು ನವಿಲುಗರಿ ಸಿಕ್ಕಿಸಿಕೊಂಡು ಮೆರೆದ ಕಾಗೆಯಂತೆ ಹೊತ್ತು ಶೋಭಿಸುತ್ತಾರೆ. ಇವರ ಮೆದುಳಿನಲ್ಲಿ ದೀಪ ಹಿಡಿದು ಎಷ್ಟು ಹುಡುಕಿದರೂ ಸ್ವತಂತ್ರ ಕಲ್ಪನಾಶಕ್ತಿಯ ಅಂಶ ಸಿಕ್ಕುವುದಿಲ್ಲ ಎಂಬ ವಾದ ಹುಡುಗರದು. ಇಬ್ಬರಿಗೂ ಅನ್ವಯವಾಗುವಂಥ ಗುಣಾವಗುಣಗಳು ಎಷ್ಟೇ ಇರಲಿ ಏನೇ ಇರಲಿ ಕುಚೇಷ್ಟೆ ಕುಯುಕ್ತಿಗಳಿಗೆ ಕಾಲುಕೆರೆಯುವವರೆಂದರೆ ರ್‍ಯಾಡ್‌ಕ್ಲಿಫ್‌ನ ಹುಡುಗಿಯರೆಂದೇ ಕಟುವಾಗಿಯೇ ಹೇಳಬೇಕು. ಸಾಲದುದಕ್ಕೆ ದೇಹ ವ್ಯಾಯಾಮ ಇವರಿಗೆ ನಿರ್ಬಂಧ ಪಾಠಗಳಲ್ಲಿ ಒಂದು. ಪುಷ್ಟಿಕರವಾದ ಆಹಾರ ತಿಂದು ನಿಷ್ಠರಾಗಿ ವ್ಯಾಯಾಮ ಮಾಡಿ ಕಟ್ಟುಮಸ್ತಾಗಿ ಬೆಳೆದಿರುವ ಒಬ್ಬೊಬ್ಬ ಪ್ರಮೀಳೆಯೂ ನಾಲ್ಕು ಜನ ನರಪೇತಲ ಹುಡುಗರನ್ನು ಒಂದೇ ಒದೆಯಿಂದ ಕೆಡಹುವ ಬಲವುಳ್ಳವರು. ಇದರ ಜೊತೆಗೆ ಗುಂಪಿನ ಮಂದಿಯೊಡನೆ ನೆಗೆದು ಕುಣಿದಾಡಿ ಕಿರಿಚಿ ಅರಿಚಿ ಪರದಾಡಿ ಕೇಕೆ ಹಾಕಿಕೊಂಡು ನಕ್ಕು ತಾವೇ ತಾವಾಗಿ ಮೆರೆಯುವ ಹವ್ಯಾಸ ಬೇರೆ. ಇಷ್ಟು ವಿಶೇಷಣಗಳಿಂದ ಶೋಭಾಯಮಾನರಾಗಿರುವ ರ್‍ಯಾಡ್‌ಕ್ಲಿಫ್ ಗಂಡುಬೀರಿಗಳನ್ನು ಅಷ್ಟು ದೊಡ್ಡ ಗುಂಪಿನಲ್ಲಿ ಕೂಡ ಒಡನೆಯೇ ಗುರುತಿಸಬಹುದು" (ಪು. ೩೧).

ಸ್ವಾಮಿಯವರು ತಮ್ಮ ವಿಶಿಷ್ಟ ನಿರೂಪಣಾ ಶೈಲಿಯ ಮೂಲಕ ಅಮೆರಿಕದ ಶಿಕ್ಷಣ ವ್ಯವಸ್ಥೆ ರೂಢಿಸಿಕೊಂಡಿರುವ ರಾಷ್ಟ್ರೀಯ ದಿನಾಚರಣೆಯನ್ನು ವಿಡಂಬನೆಯಿಂದ ವಿಮರ್ಶಿಸುತ್ತಾರೆ. ಕಾಲೇಜಿನ ಹುಡುಗ ಹುಡುಗಿಯರ ಸ್ವಾಭಿಮಾನಗಳನ್ನು ಒತ್ತಾಯಪೂರ್ವಕವಾಗಿ ಕೆರಳಿಸುವ ಬಗೆಯನ್ನು ಹೇಳುವಾಗ ಅವರಲ್ಲಿ ವ್ಯಂಗ್ಯ ಕಂಡುಬರುತ್ತದೆ. ಭಾರತದಲ್ಲಿ ರಾಷ್ಟ್ರೀಯ ಹಬ್ಬಗಳನ್ನು ಭಕ್ತಿಯಿಂದ ಗೌರವಯುತವಾಗಿ ಶ್ರದ್ಧೆಯಿಂದ ಗಂಭೀರವಾಗಿ ಆಚರಿಸಿದರೆ ಅಮೆರಿಕನ್ನರು ಸಂತೋಷದಿಂದ ಸ್ಪರ್ಧಾತ್ಮಕವಾಗಿ ನಾಟಕೀಯವಾಗಿ ಆಚರಿಸುತ್ತಾರೆ. ಇದು ಲೇಖಕರಿಗೆ ಮೆಚ್ಚುಗೆಯ ಸಂಗತಿಯೂ ಆಗಿದೆ. ಅಲ್ಲಿನ ವಿದ್ಯಾರ್ಥಿನಿಯರನ್ನು ಲೇಖಕರು ಗಂಡುಬೀರಿ ಎಂದು ಕರೆದಿರುವುದು ಒಂದು ಬಗೆಯ ಟೀಕೆಯಾಗಿದೆ. ಒಬ್ಬ ವಿಶ್ವವಿದ್ಯಾಲಯ

ಮಟ್ಟದ ಪ್ರಾಧ್ಯಾಪಕರಾಗಿ ಲೇಖಕರು ಸಹಜವಾಗಿ ಅಮೆರಿಕದ ಉನ್ನತ ವ್ಯಾಸಂಗದ ಬಗೆಗೆ ಹೆಚ್ಚು ತಿಳಿಸುತ್ತಾರೆ. ಪ್ರಾಥಮಿಕ ಶಿಕ್ಷಣದ ಬಗೆಗೆ ಗಮನಹರಿಸುವುದಿಲ್ಲ.

ಸಾರಾ ಅಬೂಬಕ್ಕರ್ ಅವರು ಸ್ವಾಮಿ ಮತ್ತು ಮೂರ್ತಿರಾವ್ ಅವರಿಗಿಂತ ಭಿನ್ನರಾಗಿ ಅಮೆರಿಕದ ಶೈಕ್ಷಣಿಕ ಚಟುವಟಿಕೆಗಳ ಮೇಲೆ ಟಿಪ್ಪಣಿ ಮಾಡುತ್ತಾರೆ. ಅಮೆರಿಕದ ಮುಂದುವರಿಕೆಗೆ ಅಲ್ಲಿನ ಶಿಕ್ಷಣವೇ ಕಾರಣ ಎಂದು ಅವರು ನಂಬುತ್ತಾರೆ. ಉಚಿತ ಮತ್ತು ಕಡ್ಡಾಯ ಶಿಕ್ಷಣ ಪದ್ಧತಿಯಲ್ಲಿ ಸೀಮಿತ ವಿದ್ಯಾರ್ಥಿಗಳಿರುವ ಕಾರಣ ಅಮೆರಿಕದಲ್ಲಿ ಅಭಿರುಚಿಗೆ ತಕ್ಕ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ಕೊಡುತ್ತಾರೆ. ಪ್ರಾಯೋಗಿಕ ಶಿಕ್ಷಣದ ಮೂಲಕ ವಿದ್ಯಾರ್ಥಿಗಳನ್ನು ಸ್ವಾವಲಂಬಿಗಳನ್ನಾಗಿ ಬೆಳೆಸಿ ಸ್ವತಂತ್ರ ಜೀವನ ನಿರ್ವಹಣೆಯನ್ನು ಕಲಿಸಲು ಶಿಕ್ಷಣ ಸಂಸ್ಥೆಗಳು ಪ್ರಯತ್ನಿಸುತ್ತವೆ ಎಂಬುದನ್ನು ಲೇಖಕಿ ಮೆಚ್ಚುಗೆಯಿಂದ ಬರೆಯುತ್ತಾರೆ. ಅಮೆರಿಕದ ಶಿಕ್ಷಣ ವ್ಯವಸ್ಥೆಯನ್ನು ಮೆಚ್ಚುವ ಸಾರಾ ಒಂದು ಸಂದರ್ಭವನ್ನು ಹೀಗೆ ದಾಖಲಿಸುತ್ತಾರೆ.

"ಹನ್ನೆರಡನೇ ತರಗತಿಯವರೆಗೆ ಶಿಕ್ಷಣ ಕಡ್ಡಾಯವಾಗಿದೆ ಹಾಗೂ ಈ ಶಿಕ್ಷಣ ಉಚಿತವಾಗಿ ನೀಡಲ್ಪಡುತ್ತದೆ. ಉಚಿತ ಶಿಕ್ಷಣವೆಂದರೆ ನಮ್ಮ ದೇಶದ ಸರಕಾರಿ ಶಾಲೆಗಳ ನೆನಪಾಗಬಹುದು. ಆದರೆ ಇಲ್ಲಿ ಸರಕಾರಿ ಶಾಲೆಗಳಿಗೂ ಖಾಸಗಿ ಶಿಕ್ಷಣ ಸಂಸ್ಥೆಗಳಿಗೂ ಹೆಚ್ಚಿನ ವ್ಯತ್ಯಾಸವೇನೂ ಇಲ್ಲ. ಸರಕಾರಿ ಶಾಲೆಗಳಲ್ಲಿ ಸಮವಸ್ತ್ರದ ಪರಿಪಾಠವಿಲ್ಲ. ಒಂದು ತರಗತಿಯಲ್ಲಿ ಇಪ್ಪತ್ತು ಅಥವಾ ಹೆಚ್ಚೆಂದರೆ ಇಪ್ಪತ್ತೈದು ಮಕ್ಕಳಿಗಿಂತ ಹೆಚ್ಚು ಮಕ್ಕಳನ್ನು ಸೇರಿಸಿಕೊಳ್ಳುವುದಿಲ್ಲ. ಎಲ್ಲಾ ತರಗತಿಗಳಲ್ಲೂ ಕಂಪ್ಯೂಟರ್‌ಗಳು ಇದ್ದೇ ಇರುತ್ತದೆ. ಮಕ್ಕಳಿಗೆ ಸಾಕುಪ್ರಾಣಿಗಳ ಕುರಿತು ಪರಿಚಯ ಮಾಡಿಸಲು ಅವರನ್ನು ಪುಟ್ಟರ್‍ಯಾಂಚ್ (ಸಾಕು ಪ್ರಾಣಿಗಳ ದೊಡ್ಡಿ)ಗೆ ಕರೆದೊಯ್ಯಲಾಗುತ್ತದೆ. ಅಲ್ಲಿ ಕೆಲವು ದನ, ಆಡು, ಕೋಳಿ, ಅವುಗಳ ಆಹಾರ ಸೇವನೆಯನ್ನು ಉಪಾಧ್ಯಾಯಿನಿ ಮಕ್ಕಳಿಗೆ ನಗುನಗುತ್ತಾ ಪರಿಚಯಿಸುತ್ತಾರೆ. ಒಮ್ಮೆ ಮಕ್ಕಳನ್ನು ತರಕಾರಿ ಬೆಳೆಯುವ ಗದ್ದೆಗೂ ಕರೆದೊಯ್ಯಲಾಯಿತು.

ತರಗತಿಗಳಲ್ಲಿ ಬಿಳಿಯರು, ಕರಿಯರು, ಮೆಕ್ಸಿಕನ್ನರು, ಚೀನಿಯರು ಮತ್ತು ಕೆಲವು ಇಂಡಿಯನ್ನರು ಇದ್ದರು. ಉಪಾಧ್ಯಾಯಿನಿ ಇವರೆಲ್ಲರನ್ನೂ ಸ್ವಂತ ಮಕ್ಕಳಂತೆ ಪ್ರೀತಿಸುತ್ತಾಳೆ. ಬಿಳಿ, ಕರಿ, ದೇಶ, ವಿದೇಶ ಎಂಬ ಯಾವುದೇ ತಾರತಮ್ಯವಿಲ್ಲ. ಓರ್ವ ಬಿಳಿಯ ಮಗುವಿಗೆ ದೊರೆಯುವ ಅದೇ ಗಮನ ಕರಿಯ ಮಗುವಿಗೂ ದೊರೆಯುತ್ತದೆ. ಸರ್ವರೂ ಸುಶಿಕ್ಷಿತರಾದಾಗ ಮಾತ್ರ ಒಂದು ದೇಶ ಅಭಿವೃದ್ಧಿ ಹೊಂದಲು ಸಾಧ್ಯ ಎಂಬುದನ್ನು ಇಲ್ಲಿನ ನಾಗರಿಕರು ಚೆನ್ನಾಗಿ ಮನವರಿಕೆ ಮಾಡಿಕೊಂಡಿದ್ದಾರೆ. ಶಾಲೆಗಳಲ್ಲಿ ಪ್ರವೇಶ ಪಡೆಯಲು ಯಾವುದೇ ತೊಂದರೆಯಿಲ್ಲ. ದಾನ ಶುಲ್ಕದ ಹಾವಳಿಯಂತೂ ಇಲ್ಲವೇ ಇಲ್ಲ. ಯಾವ ಮಗು ಎಲ್ಲಿಂದ ಬಂದರೂ ಆ ಪರಿಸರದಲ್ಲಿರುವ ಶಾಲೆಗೆ ಆ ಮಗುವನ್ನು ಸೇರಿಸಿಕೊಳ್ಳಲೇಬೇಕು. ಹಿಂದಿನ ಶಾಲೆಯ ಸರ್ಟಿಫಿಕೇಟ್ ತಂದರಾಯಿತು. ಶಾಲೆಗಳಲ್ಲಿ ಸ್ಥಳ ಇಲ್ಲವೆನ್ನುವ ಪರಿಪಾಠವೇ ಇಲ್ಲ (ಪು. ೧೩೪-೧೩೬).

ಲೇಖಕಿ ಪ್ರಾಥಮಿಕ ಶಿಕ್ಷಣದ ಬಗ್ಗೆ ಅದರಲ್ಲೂ ಮಕ್ಕಳ ಶಿಕ್ಷಣದ ಬಗ್ಗೆ ಹೆಚ್ಚು ಆಸಕ್ತಿ ತೋರುತ್ತಾರೆ. ಇದು ಅವರ ಮಾತೃಹೃದಯದ ಪ್ರೀತಿಯನ್ನು ತಿಳಿಸುತ್ತದೆ. ಚಿಕ್ಕ ಮಕ್ಕಳ ಮೇಲೆ ಸಹಜ ವಾತ್ಸಲ್ಯ ಇರುವ ಲೇಖಕಿ ಅಮೆರಿಕದ ಶಿಕ್ಷಣ ವ್ಯವಸ್ಥೆಯಲ್ಲಿ ಇರುವ ಸೌಲಭ್ಯಗಳನ್ನು ಕುರಿತು ಬರೆಯುವಾಗ, ಪರೋಕ್ಷವಾಗಿ ಭಾರತದ ಶಿಕ್ಷಣ ವ್ಯವಸ್ಥೆಯಲ್ಲಿ ಅಂತಹ ಸೌಲಭ್ಯಗಳಿಲ್ಲ ಎಂಬ ವಿಷಾದವನ್ನು ಧ್ವನಿಸುತ್ತಾರೆ.

ಸಾರಾ ಚಿಕ್ಕ ಮಕ್ಕಳನ್ನು ಕರಿಯ ಬಿಳಿಯ ಎಂದು ಕಾಣದೇ ಸಮಾನ ಮನೋಭಾವದಿಂದ ಕಾಣಲಾಗುತ್ತದೆ ಎಂದು ಹೇಳುವುದು, ಪರೋಕ್ಷವಾಗಿ ಭಾರತದ ಅನೇಕ ಶಾಲೆಗಳಲ್ಲಿ ದಲಿತರಿಗೆ ಸಮಾನತೆಯಿಂದ ಕಾಣಲಾಗುವುದಿಲ್ಲ ಎಂಬುದರ ಪರೋಕ್ಷ ಟೀಕೆಯಾಗಿದೆ. ಅಮೆರಿಕದ ಸ್ತ್ರೀ ಶಿಕ್ಷಣವನ್ನು ಹೇಳುವಾಗ ಭಾರತದಲ್ಲಿ ಅನೇಕ ಮಹಿಳೆಯರು ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ ಎಂಬುದನ್ನು ತಿಳಿಸುತ್ತಾರೆ. ಅಮೆರಿಕನ್ ಶಾಲೆಗಳಲ್ಲಿ ಪ್ರವೇಶ ಅವಕಾಶಗಳ ಬಗೆಗೆ ಹೇಳುವಾಗ ಅಲ್ಲಿ ಯಾವುದೇ ವಂತಿಗೆಗಳ ಹಾವಳಿ ಇಲ್ಲ ಎಂದು ದಾಖಲಿಸಿರುವುದು ಪರೋಕ್ಷವಾಗಿ ಭಾರತದ ಶಾಲೆಗಳ ಡೊನೆಷನ್ ಹಾವಳಿಯನ್ನು ಕುರಿತು ಮಾಡುವ ಟೀಕಿಯಂತೆ ಕಂಡುಬರುತ್ತದೆ. ಮಕ್ಕಳ ವಿದ್ಯಾಭ್ಯಾಸ, ಕ್ರೀಡಾ ಚಟುವಟಿಕೆಗಳಲ್ಲಿ ಶಿಕ್ಷಕರಷ್ಟೆ ಪೋಷಕರ ಪಾತ್ರವೂ ಮಹತ್ವದ್ದಾಗಿದೆ ಎಂಬುದನ್ನು ಲೇಖಕಿ ಹೇಳುತ್ತಾರೆ. ಭಾರತದಲ್ಲಿ ಪೋಷಕರು ಮಕ್ಕಳ ಶಿಕ್ಷಣದ ಬಗೆಗೆ ಚಿಂತಿಸುವುದು ಕಡಿಮೆ. ಮಕ್ಕಳ ಅಭಿವೃದ್ಧಿಗೆ ಪೋಷಕರೂ ಸಹಕರಿಸಬೇಕೆಂಬುದು ಅವರ ಆಶಯವಾಗಿದೆ.

ಮೂವರೂ ಲೇಖಕರು ಪ್ರವಾಸ ಕಥನಗಳಲ್ಲಿ ಶಿಕ್ಷಣ ವ್ಯವಸ್ಥೆಯ ಚಿತ್ರಣ ವಿಭಿನ್ನ ದೃಷ್ಟಿಕೋನಗಳಿಂದ ಕೂಡಿರುವುದು ಗೋಚರವಾಗುತ್ತದೆ. ಆದರೆ ಅಮೆರಿಕದ ಶಿಕ್ಷಣ ವ್ಯವಸ್ಥೆ ಅಷ್ಟು ಆದರ್ಶಪ್ರಾಯವಾಗಿಲ್ಲ, ಅಲ್ಲೂ ಸಿರಿವಂತರಿಗೆ ಬೇರೆ ಶಿಕ್ಷಣ ವ್ಯವಸ್ಥೆಯಿದೆ. ಅಲ್ಲಿನ ಕರಿಯರ ಮಕ್ಕಳಿಗೆ ಶೈಕ್ಷಣಿಕ ತಾರತಮ್ಯ ಇದೆ ಎಂದು ಅಮೆರಿಕವನ್ನು ಕುರಿತ ವಿಮರ್ಶಾತ್ಮಕ ದನಿಯಿರುವ ಕೃತಿಗಳಲ್ಲಿ ಮಾಹಿತಿಯಿದೆ. ಅದನ್ನು ಓದುವಾಗ ಸಾರಾ ಅವರು ಈ ಕುರಿತು ವಿಮರ್ಶಾತ್ಮಕವಾಗಿಲ್ಲ ಎಂದು ಅನಿಸುತ್ತದೆ.

**ಟಿಪ್ಪಣಿಗಳು**


೧. ಗಿರೀಶ್ ಕೆ., **ಅಮೆರಿಕ - ಅಂತರಂಗ,** ಮುನ್ನುಡಿಯಿಂದ

೨. ಬಾಗಲೋಡಿ ದೇವರಾಯ, **ಪ್ರಬುದ್ಧ ಕರ್ನಾಟಕ, ಸಂಪುಟ-೩೦, ಸಂಚಿಕೆ-೧,** ಪು.೩೩

೩. ಪ್ರಭುಶಂಕರ, **ಅಮೆರಿಕದಲ್ಲಿ ನಾನು-ಶಾಂತಿ,** ಪು.೧೩


* * *

## ಅಧ್ಯಾಯ ೩

# ಅಮೆರಿಕ ಪ್ರವಾಸ ಕಥನಗಳಲ್ಲಿ ಆರ್ಥಿಕ-ರಾಜಕೀಯ ನೋಟಗಳು

### ೩.೧ ಆರ್ಥಿಕ ರಾಜಕಾರಣದ ಚರ್ಚೆ

ಅಮೆರಿಕ ಕುರಿತ ಹೆಚ್ಚಿನ ಪ್ರವಾಸ ಕಥನಗಳಲ್ಲಿ ಆರ್ಥಿಕ ರಾಜಕಾರಣ ಹೇಗೆ ಕಾರ್ಯನಿರ್ವಹಿಸಿದೆ ಎಂಬ ಚರ್ಚೆ ಇರುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡ ಮೂರು ಪ್ರವಾಸ ಕಥನಗಳಲ್ಲಿ ಸಹ ಅಮೆರಿಕೆಯ ಆರ್ಥಿಕ ರಾಜಕೀಯದ ಪ್ರಸ್ತಾಪವಿದೆ. ಅಮೆರಿಕ ಜಗತ್ತಿನ ಶ್ರೀಮಂತ ದೇಶಗಳಲ್ಲಿ ಒಂದು. ಅದು ತನ್ನ ಬಲಿಷ್ಠ ಮಿಲಿಟರಿ ಶಕ್ತಿಯಿಂದ, ಆಧುನಿಕ ಶಸ್ತ್ರಾಸ್ತ್ರಗಳಿಂದ, ತೈಲ ನಿಕ್ಷೇಪ ಇರುವ ಬಡ ದೇಶಗಳನ್ನು ಬೆದರಿಸಿ ಅವುಗಳ ಸಂಪತ್ತನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿದೆ. ಅಂತಹ ಸಂಪತ್ತನ್ನು ಹೇಗೆ ಬಳಸುತ್ತಾರೆ? ಆಂತರಿಕವಾಗಿ ವ್ಯಾಪಾರ ಮಾಡುವಾಗ ಲಾಭ ಗಳಿಸಲು ಎಂತಹ ಕಸರತ್ತುಗಳನ್ನು ಅವರು ಮಾಡುತ್ತಾರೆ? ಎನ್ನುವ ಸಂಗತಿಗಳನ್ನು ಈ ಭಾಗದಲ್ಲಿ ನೋಡಬಹುದು.

ಮೂರ್ತಿರಾವ್ ಅವರು ತಮ್ಮ ಪ್ರವಾಸ ಕಥನದಲ್ಲಿ ಅಮೆರಿಕದಲ್ಲಿನ ಆರ್ಥಿಕ ರಾಜಕಾರಣದ ಕ್ವಚಿತ್ತಾದ ಪ್ರಸ್ತಾಪ ಮಾಡುತ್ತಾರೆ. 'ಡಿಪಾರ್ಟ್‌ಮೆಂಟಲ್ ಸ್ಟೋರ್', 'ಏನಾದರೂ ಮಾಡುತ್ತಿರು ತಮ್ಮ', ಮತ್ತು 'ಅರ್ಥಶಾಸ್ತ್ರಕ್ಕೆ ಅತಿಕ್ರಮ ಪ್ರವೇಶ' ಎಂಬ ಅಧ್ಯಾಯಗಳಲ್ಲಿ ಅಲ್ಲಿನ ಆರ್ಥಿಕ ರಾಜಕಾರಣದ ಸ್ವರೂಪವನ್ನು ಚಿತ್ರಿಸುತ್ತಾರೆ. ಲೇಖಕರು 'ಡಿಪಾರ್ಟ್‌ಮೆಂಟಲ್ ಸ್ಟೋರ್' ಎಂಬ ಅಧ್ಯಾಯದಲ್ಲಿ ಅಮೆರಿಕದ ಕಿರಾಣಿ ಅಂಗಡಿಗಳ ಸ್ವರೂಪ, ಅವುಗಳ ವಿನ್ಯಾಸ ಎಂತಹುದು ಎಂಬುದನ್ನು ವರ್ಣಿಸುತ್ತಾರೆ. ಈ ಅಂಗಡಿಗಳಲ್ಲಿ ದೊಡ್ಡ ಗಾತ್ರದ ಭಾರಿಕಟ್ಟಡಗಳಲ್ಲಿ ಎಲ್ಲ ಸಾಮಗ್ರಿಗಳು ಒಂದೇ ಕಡೆ ಸಿಗುವಂತೆ ವ್ಯವಸ್ಥೆ ಕಲ್ಪಿಸಲಾಗಿರುತ್ತದೆ. ಬೇಕಾದ ವಸ್ತುಗಳನ್ನು ಗಿರಾಕಿಗಳು ತಳ್ಳುಗಾಡಿಯಲ್ಲಿ ಹಾಕಿಕೊಂಡು ಬರುವಂತಹ ವ್ಯವಸ್ಥೆಯಿದೆ. ಗಿರಾಕಿಗಳನ್ನು ಸೆಳೆಯಲು ಏನೆಲ್ಲಾ ಕಸರತ್ತುಗಳನ್ನು ಸ್ಟೋರ್ ಮಾಲಿಕರು ಮಾಡುತ್ತಾರೆಂಬುದನ್ನು ಲೇಖಕರು ವಿವರವಾಗಿ ಬರೆಯುತ್ತಾರೆ. ಅಂತಹ ಒಂದು ವರ್ಣನೆ ಹೀಗಿದೆ :

"ಇಲ್ಲಿ ಯಾವ ಉದ್ಯಮವಾಗಲಿ ಯಾವ ಬಗೆಯ ಜೀವನವಾಗಲಿ, ಅದು ಒಂದಲ್ಲ ಒಂದು ರೀತಿಯಲ್ಲಿ ಮೋಟಾರ್ ಕಾರನ್ನು ಅವಲಂಬಿಸಿ ನಿಲ್ಲಬೇಕು. 'ಎಲ್ಲವೂ ಚಲಿಸುವುದು ಅದರ ಸುತ್ತ' ಅಥವಾ 'ಎಲ್ಲವೂ ಚಲಿಸುವುದು ಅದರಿಂದಾಗಿ' ಅಂಗಡಿ ಇಡುವವರು ಇದನ್ನು ಮರೆಯುವಂತಿಲ್ಲ. ಕಾರ್ ನಿಲ್ಲಿಸಲು ಸ್ಥಳವಿಲ್ಲದಿದ್ದರೆ ನಿಮ್ಮ ಅಂಗಡಿಗೆ ಯಾರು ಬರುತ್ತಾರೆ. ಗಾಲ್ಫ್‌ಮಿಲ್ಸ್ ಷಾಪಿಂಗ್ ಕೇಂದ್ರದ ಸುತ್ತ ಸುಮಾರು ಸಾವಿರ ಕಾರುಗಳನ್ನು ನಿಲ್ಲಿಸುವಷ್ಟು ಸ್ಥಳ ಉದ್ದೇಶಪೂರ್ವಕವಾಗಿ ಅದಕ್ಕಾಗಿಯೇ

ಕಾದಿಟ್ಟಿರುವ ಸ್ಥಳ ಇದೆ. ಇಷ್ಟಾದರೂ ಕೆಲವು ವೇಳೆ ಜಾಗ ಸಿಕ್ಕದೇ ಇರುವುದುಂಟು. ಹೀಗೆ, ಪಾರ್ಕಿಂಗ್ ಸೌಲಭ್ಯ ಒಂದು ಕಡೆ; ಮತ್ತೊಂದು ಕಡೆ ಅಮೆರಿಕದಲ್ಲೆಲ್ಲ ಕಂಡುಬರುವ ಪ್ರವೃತ್ತಿ; ಎಲ್ಲ ಸಂಸ್ಥೆಗಳೂ ಬೃಹತ್ ಪ್ರಮಾಣಕ್ಕೆ ಬೆಳೆದು ಸಣ್ಣ ಸಣ್ಣವನ್ನು ಹಿಂದೆ ಹಾಕುವ ನಾಶಮಾಡುವ ಅಥವಾ ತಮ್ಮ ಸೇವೆಗೆ ಬಳಸಿಕೊಳ್ಳುವ ಪ್ರವೃತ್ತಿ ಇವೆರಡರಿಂದಾಗಿ ಇಲ್ಲಿ ಈ ಭಾರಿ ಸಂಸ್ಥೆಗಳ ಚಟುವಟಿಕೆಯೇ ಹೆಚ್ಚು. ಹಣದ ಅಭಾವವಿಲ್ಲದ್ದರಿಂದ ಅವು ತಮಗೆ ಅನುಕೂಲವಾದ ಸ್ಥಳದಲ್ಲಿ ಝಂಡಾ ಹಾಕಬಹುದು; ಲಾಭ-ನಷ್ಟದ ಏರುಪೇರುಗಳನ್ನು ತಡೆಯಬಹುದು; ಟಿ.ವಿ., ರೇಡಿಯೋ ಮುಂತಾದ ಸಾಧನಗಳನ್ನು ಉಪಯೋಗಿಸಿಕೊಂಡು ಘಂಟೆಯೊಂದಕ್ಕೆ ಒಂದು ಮಿಲಿಯನ್ ಡಾಲರ್‌ಗಳನ್ನಾದರೂ ಕೊಟ್ಟು ಜಾಹಿರಾತು ಮಾಡಬಹುದು; ತಮ್ಮ ಪ್ರಭಾವವನ್ನು ನಾಡಿನಾದ್ಯಂತ ಮಾತ್ರವಲ್ಲ, ಇತರ ದೇಶಗಳಿಗೂ ಬೀರಬಹುದು. ಸಂಯುಕ್ತ ಸಂಸ್ಥಾನಗಳಲ್ಲಿ ಪೆನ್ನಿ ಸಂಸ್ಥೆಯ ಸ್ಟೋರುಗಳು ೧೬೦೦ ಇವೆಯೆಂತೆ ಅವರ ಜಾಹಿರಾತುಗಳಲ್ಲಿ ಇದನ್ನು ಕಾಣಿಸುತ್ತಾರೆ. ವುಲ್ ವರ್ತ ಸಂಸ್ಥೆಯು ಇಂಗ್ಲೆಂಡಿನಲ್ಲೂ ಇದೆಯಂತೆ" (ಪು. ೨೮).

ಈ ವರ್ಣನೆಯಿಂದ ಅಮೆರಿಕದ ವಾಣಿಜ್ಯ ಸಂಸ್ಕೃತಿಯು ತನ್ನ ಲಾಭಕ್ಕಾಗಿ ಎಂತಹ ಸಾಹಸ ಮತ್ತು ವೃತ್ತಿಪರತೆಯನ್ನು ಸಾಧಿಸಿದೆ ಎಂಬುದು ತಿಳಿಯುತ್ತದೆ. ಪ್ರಕೃತಿಯಲ್ಲಿನ ಅನೇಕ ಪ್ರಾಣಿ ಪಕ್ಷಿಗಳು ತಮಗಿಂತ ಕಿರಿಯ ಪ್ರಾಣಿಗಳನ್ನು ಭಕ್ಷಿಸಿ ಜೀವಿಸುತ್ತವೆ. ಹಾಗೆ ಅಮೆರಿಕದ ದೈತ್ಯ ಡಿಪಾರ್ಟ್‌ಮೆಂಟಲ್ ಸ್ಟೋರುಗಳು ಜಗತ್ತಿನಾದ್ಯಂತ ಇರುವ ತಮ್ಮ ಉಪಶಾಖೆ, ಕಿರಿಯ ಸಂಸ್ಥೆಗಳ ಮೂಲಕ ಲಾಭಾಂಶವನ್ನು ಹೆಚ್ಚಿಸಿಕೊಳ್ಳುತ್ತವೆ. ಅವುಗಳಿಗೆ ಜಾಹಿರಾತುಗಳೆ ಜನಪ್ರಿಯತೆಯನ್ನು ತಂದುಕೊಡುತ್ತಿವೆ ಎಂಬುದನ್ನು ಲೇಖಕರು ಹೇಳುತ್ತಾರೆ.

ಜಾಹಿರಾತುಗಳ ಬಗೆಗೆ ಶಿಕ್ಷಣ ನೀಡುವ ತರಬೇತಿ ಸಂಸ್ಥೆಗಳು ಅಮೆರಿಕದಲ್ಲಿವೆ ಎಂಬ ವಿಶಿಷ್ಟ ಸಂಗತಿಯನ್ನು ಲೇಖಕರು ಕಾಣಿಸುತ್ತಾರೆ. ಪುರಾತನ ಕಾಲದ ಸ್ಥಳಗಳನ್ನು ಸಂರಕ್ಷಿಸಿ ಅವುಗಳನ್ನು ಪ್ರವಾಸಿ ತಾಣಗಳನ್ನಾಗಿಸಿ ಪ್ರವಾಸಿ ಶುಲ್ಕದಿಂದ ಹಣ ಗಳಿಸುವುದನ್ನು ಲೇಖಕರು ಬರೆಯುತ್ತಾರೆ. ಅಮೆರಿಕನ್ನರ ಸಾಹಸಗಳು ಕೈಗಾರಿಕಾ ಕ್ಷೇತ್ರದಲ್ಲೂ ಇರುವುದನ್ನು ವಿಶೇಷವಾಗಿ ಗುರುತಿಸಲಾಗಿದೆ. ಬೃಹತ್ ಬಂಡವಾಳ ಹೊಂದಿರುವ ಖಾಸಗಿ ಸಂಸ್ಥೆಗಳು ವಿದೇಶಗಳಲ್ಲಿಯೂ ತಮ್ಮ ಶಾಖೆಯ ಅಂಗಡಿಗಳನ್ನು ಹೊಂದಿವೆ ಎಂಬುದನ್ನು ಮತ್ತು ಕೈಗಾರಿಕೆಯಲ್ಲಿನ ಬೃಹತ್ ಯಂತ್ರಗಳ ಬಗೆಗೆ 'ಏನಾದರೂ ಸರಿಯೇ ಕೊಳ್ಳುತಿರು ತಮ್ಮ', 'ಅರ್ಥಶಾಸ್ತ್ರಕ್ಕೆ ಅತಿಕ್ರಮ ಪ್ರವೇಶ' ಎಂಬ ಅಧ್ಯಾಯಗಳಲ್ಲಿ ಬರುತ್ತದೆ. ಲೇಖಕರು ಹೇಳುವಂತೆ ಈ ಯಾಂತ್ರಿಕ ಜಗತ್ತಿನ ನೋಟ ಹೀಗಿದೆ :

"ಅಮೆರಿಕನ್ನರು ಸಾಹಸಿಗಳು; ಅವರ ಕಾರ್ಖಾನೆಗಳು ದೈತ್ಯ ಪ್ರಮಾಣದವು; ಅವುಗಳ ಉತ್ಪಾದನಾ ಶಕ್ತಿ ಅದ್ಭುತವಾದದ್ದು; ಅವರ ವ್ಯಾಪಾರ ಕೋಟಿಗಟ್ಟಲೆ ಬೆಲೆಯದು; ಆದರೆ ಆ ಉತ್ಪಾದನೆಯೂ ವ್ಯಾಪಾರವೂ ನಡೆಯುತ್ತಲೇ ಇರಬೇಕು. ಹಣ ಬಂದು ಸುರಿಯುತ್ತಲೇ ಇರಬೇಕು. ದೆವ್ವಗಳನ್ನು ವಶಮಾಡಿಕೊಂಡರೆ ಅವಕ್ಕೆ ಒಂದು ಕ್ಷಣವೂ ಬಿಡುವಿಲ್ಲದಂತೆ ಕೆಲಸವನ್ನು ಒದಗಿಸುತ್ತಲೇ ಇರಬೇಕು.

ಇಲ್ಲದಿದ್ದರೆ ಅವು ನಮ್ಮನ್ನೇ ತಿಂದು ಹಾಕಿಬಿಡುತ್ತವೆ. ಕೈಗಾರಿಕೆಯ ಬೃಹತ್ ಸಂಸ್ಥೆಗಳು ಆ ದೆವ್ವಗಳ ಹಾಗೆ" (ಪು. ೧೫೪).

ಮೇಲಿನ ಮಾತುಗಳಲ್ಲಿ ಅಮೆರಿಕದ ಬೃಹತ್ ಬಂಡವಾಳಶಾಹಿ ಆರ್ಥಿಕತೆಯ ಅಭಿವೃದ್ಧಿಯಲ್ಲಿ ಕೈಗಾರಿಕೆಗಳು ಎಂತಹ ಪಾತ್ರವಹಿಸಿವೆ ಎಂಬ ಧ್ವನಿಪೂರ್ಣ ಚಿತ್ರಣವಿದೆ. ಕೈಗಾರಿಕೆಗಳನ್ನು ಲೇಖಕರು ದೆವ್ವಗಳಿಗೆ ಹೋಲಿಸಿರುವುದು ಮಾರ್ಮಿಕವಾಗಿದೆ. ಭಾರತದಲ್ಲಿ ದೆವ್ವಗಳ ಕಲ್ಪನೆ, ಅವುಗಳು ತಮಗೆ ಆಯಾಸವಾಗದಂತೆ ನಿರ್ವಹಿಸುವ ಕಾರ್ಯಗಳನ್ನು ಅಮೆರಿಕದ ಕೈಗಾರಿಕೆಗಳಿಗೆ ಹೋಲಿಸಿರುವುದು. ಲೇಖಕರು ವಿದೇಶವನ್ನು ಸ್ವಂತ ದೇಶದ ಮೂಲಕ ನೋಡುವ ಪ್ರಯತ್ನ ಮಾಡಿದ್ದಾರೆ. ಇಂತಹ ಮುಂದುವರಿದ ದೇಶದಲ್ಲಿದ್ದರೂ ತಾವು ತಮ್ಮ ಗ್ರಹಿಕೆಯ ಸಂಗತಿಗಳೊಂದಿಗೆ ಹೋಲಿಸುವುದು ಲೇಖಕರ ಸ್ವ ಸಂಸ್ಕೃತಿಯ ಮೇಲಿನ ಅಭಿಮಾನವನ್ನು ತಿಳಿಸುತ್ತದೆ. ಸಾಮಾನ್ಯವಾಗಿ ವ್ಯಕ್ತಿಯೊಬ್ಬ ಯಾವುದೇ ದೇಶಕ್ಕೆ ಹೋದರೂ ಸ್ವಂತ ನೆಲೆಗಟ್ಟಿನ ಗ್ರಹಿಕೆಯೊಂದಿಗೆ ಅಲ್ಲಿ ಕಂಡ ಸಂಗತಿಗಳನ್ನು ಜೋಡಿಸಲಾಗುತ್ತದೆಯೇ ಹೊರತು ಅಲ್ಲಿನ ನೈಜ ಚರಿತ್ರೆಯ ಜೊತೆಗೆ ಗ್ರಹಿಸುವುದಿಲ್ಲ ಎಂಬುದು ಇದರಿಂದ ತಿಳಿಯುತ್ತದೆ.

ಬಿ.ಜಿ.ಎಲ್. ಸ್ವಾಮಿಯವರು ತಮ್ಮ ಪ್ರವಾಸ ಕಥನದಲ್ಲಿ ಅಮೆರಿಕದ ಆರ್ಥಿಕ ರಾಜಕಾರಣವನ್ನು ಚಿತ್ರಿಸುತ್ತಾರೆ. ಅವರು 'ಮತಪ್ರಚಾರದ ವೈಖರಿ' ಮತ್ತು 'ರಾಕೆಟ್ ವ್ಯಾಪಾರ' ಎಂಬ ಅಧ್ಯಾಯಗಳಲ್ಲಿ ಅಮೆರಿಕದಲ್ಲಿನ ಆರ್ಥಿಕ ರಾಜಕಾರಣದ ಚಿತ್ರಣವನ್ನು ಕೊಡುತ್ತಾರೆ. ಅಮೆರಿಕನ್ನರು ತಮ್ಮ ವ್ಯವಹಾರಿಕ ಜೀವನದಲ್ಲಿ ಧರ್ಮವನ್ನೂ ಸಹ ಬಳಸಿಕೊಂಡಿದ್ದಾರೆಂಬುದನ್ನು ಲೇಖಕರು ಗಮನಿಸುತ್ತಾರೆ. ಅವರು ಬೈಬಲ್‌ಗೆ ಅನೇಕ ವ್ಯಾಖ್ಯಾನಗಳನ್ನು ಬರೆದು ಹೋಟೆಲ್‌ಗಳಲ್ಲಿ ತೂಗಿಹಾಕಿ ಪ್ರಚಾರ ಮಾಡುವುದನ್ನು ಲೇಖಕರು ಬರೆಯುತ್ತಾರೆ. ಧಾರ್ಮಿಕವಾಗಿ ಜನರನ್ನು ಸೆಳೆಯಲು ಮತ್ತು ಹೋಟೆಲ್ ಉದ್ಯಮ ಸುಧಾರಿಸಲು ಇಂತಹ ತಂತ್ರಗಳು ಸಹಾಯ ಮಾಡಿವೆ. ಅದರ ಮೂಲಕ ಬೈಬಲ್ಲಿನ ಪ್ರತಿಗಳ ಮಾರಾಟ ಮಾಡಿ ಹಣ ಗಳಿಸುತ್ತಾರೆ ಎಂದು ವ್ಯಂಗ್ಯದಿಂದ ಲೇಖಕರು ಹೇಳುತ್ತಾರೆ.

'ರಾಕೆಟ್ ವ್ಯಾಪಾರ' ಎಂಬ ಅಧ್ಯಾಯದಲ್ಲಿ ಅಮೆರಿಕದಲ್ಲಿನ ಮೋಸದ ಜೀವನದ ಚಿತ್ರಗಳಿವೆ. ಅವುಗಳಲ್ಲಿ ಮಕ್ಕಳನ್ನು ಅಪಹರಿಸಿ ಬಿಡುಗಡೆಗೆ ಹಣ ಕೇಳುವುದೂ ಒಂದು. ಇತ್ತೀಚಿನ ದಿನಗಳಲ್ಲಿ ಭಾರತದಲ್ಲೂ ಸಹ ಇಂತಹ ಪ್ರಕರಣಗಳು ಕಂಡುಬರುತ್ತಿವೆ. ನಾಗರಿಕ ಜೀವನ ಶೈಲಿಯಿರುವ ಎಲ್ಲ ಸಮಾಜಗಳಲ್ಲಿ ಇಂತಹ ಕೃತ್ಯಗಳು ಸಹಜವಾಗಿ ಚಾಲನೆಗೆ ಬರುತ್ತಿವೆ. ಅಮೆರಿಕದಲ್ಲಿನ ಕಳ್ಳತನಗಳೂ ಸಹ ಹೇಗೆ ಹೈಟೆಕ್ ಆಗಿ ನಡೆಯುತ್ತವೆ ಎಂಬುದು ಲೇಖಕರ ಒಂದು ಅನುಭವದಲ್ಲಿ ತಿಳಿಯುತ್ತದೆ.

"ಒಂದು ರಾತ್ರಿ ಹನ್ನೊಂದು ಗಂಟೆವರೆಗೂ ಲ್ಯಾಬರೇಟರಿಯಲ್ಲಿಯೇ ಇದ್ದು, ಮನೆಗೆ ಹೊರಡೋಣವೆಂದು ಹೊರಕ್ಕೆ ಬಂದೆ. ಬೆಳದಿಂಗಳಿಗೆ ಮನಸೋತು ಒಂದರ್ಧ ಗಂಟೆ ಹಾಗೆಯೇ ಸುತ್ತಾಡಿಕೊಂಡು ಮನೆ ಸೇರೋಣವೆಂದು ಒಳಸುದಾರಿಯಲ್ಲಿ ಹೋಗುತ್ತಿದ್ದೆ. ದಾರಿಯಲ್ಲಿ ಜನ ಸಂಚಾರವಿರಲಿಲ್ಲ. ಅಡ್ಡರಸ್ತೆಯ ಹತ್ತಿರ ಬಂದೆ. ೨೦-೨೫ ವಯಸ್ಸಿನ ಮೂವರು ಯುವಕರು ತಡೆದರು.

ತಬ್ಬಿಬ್ಬಾಗಿ ನಿಂತೆ. ಒಡನೆಯೇ ಒಬ್ಬ ನನ್ನ ಬೆನ್ನ ಹಿಂದೆ ಬಂದು ಏನನ್ನೋ ಒತ್ತಿದ. ಕೋಲಿನ ತುದಿಯನ್ನು ಒತ್ತಿದಂತೆ ಅನುಭವವಾಯಿತು. ಮೈಯೆಲ್ಲ ಬೆವರಿತು. ಇನ್ನೊಬ್ಬ ನನ್ನ ರಟ್ಟೆಯನ್ನು ಹಿಡಿದುಕೊಂಡು ಮೂರನೆಯವ 'ಹಲೋ ಡಾಕ್ ಹಣವನ್ನು ಕೊಟ್ಟುಬಿಡು' ಎಂದ. ಮರುಮಾತಿಲ್ಲದೆ ಪರ್ಸು ತೆಗೆದುಕೊಟ್ಟೆ. ನಿನ್ನ ಚುರುಕು ಬುದ್ಧಿ ಉಪಯೋಗಿಸಬೇಡ ಕೂಗಿಕೊಳ್ಳಬೇಡ ಪೋಲಿಸರಿಗೆ ದೂರು ಕೊಡಬೇಡ. ನಾವು ಕಣ್ಮರೆಯಾಗುವವರೆಗೂ ಇಲ್ಲಿಯೇ ನಿಂತಿರು. ಇಲ್ಲದಿದ್ದರೆ, ರಿವಾಲ್ವರು ಹಾರಿ ನಿನ್ನ ಮೈಯನ್ನೆಲ್ಲ ತೂತು ಮಾಡೀತು! ಎಂದು ಹೇಳಿ ಓಡಿ ಮಾಯವಾದರು" (ಪು. ೮೩).

ಈ ಸನ್ನಿವೇಶವು ಅಮೆರಿಕದ ಜನರು ಹಣ ಗಳಿಸಲು ರಾತ್ರಿವೇಳೆಯಲ್ಲಿ ಎಂತಹ ಕ್ರೂರ ಕೃತ್ಯಗಳನ್ನು ಮಾಡಲೂ ಸಹ ಹಿಂಜರಿಯುವುದಿಲ್ಲ ಎಂಬುದನ್ನು ರುಜುವಾತುಪಡಿಸುತ್ತದೆ. ಅಸಮಾನತೆ, ನಿರುದ್ಯೋಗ, ಬಡತನ, ಅಸಹನೆ, ಸಮಾಜದ ಏರುಪೇರುಗಳು ಮೊದಲಾದ ಕಾರಣಗಳು ಸಮಾಜದಲ್ಲಿ ಕೊಲೆ, ದರೋಡೆ ನಡೆಯಲು ಕಾರಣೀಭೂತವಾಗುತ್ತವೆ. ಆದ್ದರಿಂದ ಇದು ಕೇವಲ ಅಮೆರಿಕದ ಕಥೆ ಮಾತ್ರವಲ್ಲ. ನಾಗರಿಕ ಜಗತ್ತಿನ ಎಲ್ಲ ದೇಶಗಳಲ್ಲೂ ಇದು ಸಾಮಾನ್ಯ ಸಂಗತಿ ಎನ್ನಬಹುದಾಗಿದೆ.

ಸಾರಾ ಅವರು ಮೂರ್ತಿರಾವ್ ಮತ್ತು ಸ್ವಾಮಿಯವರಿಗಿಂತ ಭಿನ್ನವಾಗಿ ಅಮೆರಿಕದ ಆರ್ಥಿಕ ರಾಜಕಾರಣದ ಆಯಾಮವನ್ನು ಗುರುತಿಸುತ್ತಾರೆ. ಅವರ ಪ್ರಕಾರ ಅಮೆರಿಕದಲ್ಲಿ ಆರ್ಥಿಕ ಸಮೃದ್ಧಿ ತುಂಬಿತುಳುಕುತ್ತಿದ್ದರೆ ಅದಕ್ಕೆ ಕಾರಣ ಶುಲ್ಕ ಪದ್ಧತಿ ಮತ್ತು ಕೊಲೆ ದರೋಡೆಗಳು. ಅಮೆರಿಕದಲ್ಲಿ ಪ್ರೇಕ್ಷಣೀಯ ಸ್ಥಳಗಳ ವೀಕ್ಷಣೆಗೆ ಅತಿ ಹೆಚ್ಚು ಶುಲ್ಕ ವಿಧಿಸಿರುವುದು ಕಂಡು ಬರುತ್ತದೆ ಎಂದು ಸಾರಾ ಭಾವಿಸುತ್ತಾರೆ.

ಡಿಸ್ನಿಲ್ಯಾಂಡ್ ಎಂಬ ಪ್ರಸಿದ್ಧ ಜಾಗದ ಬಗ್ಗೆ ಬರೆಯುತ್ತಾ "ಇಲ್ಲಿ ಪ್ರತಿಯೊಬ್ಬರಿಗೆ ಟಿಕೇಟಿಗೆ ನಲ್ವತ್ತು ಡಾಲರ್. ಮಕ್ಕಳಿಗೆ ಮೂವತ್ತು ಡಾಲರ್; ಟಿಕೆಟ್ ಕೊಂಡುಕೊಂಡು ಒಳಗೆ ಹೋದರೆ ಮಕ್ಕಳನ್ನು ಮರಳು ಮಾಡಲು ಏನೇನು ಬೇಕೊ ಅವೆಲ್ಲವೂ ಅದರೊಳಗಿದ್ದವು" ಎನ್ನುತ್ತಾರೆ (ಪು. ೯೭). ಲೇಖಕಿ ಅಮೆರಿಕನ್ನರ ಹಣ ಗಳಿಕೆಯ ಅನೇಕ ಕ್ರೂರ ಮುಖಗಳನ್ನು ಚಿತ್ರಿಸಿದ್ದಾರೆ. ಇದರಲ್ಲಿ ಗಂಡಂದಿರು ಹೆಂಡತಿಯರನ್ನು ಕೊಂದು ಅವರ ಇನ್ಸ್ಯುರೆನ್ಸ್ ಪಾಲಿಸಿ ಹಣವನ್ನು ಪಡೆಯುವುದೂ ಒಂದು.

"ಅಮೆರಿಕದಲ್ಲಿ ಗಂಡಂದಿರು ಹೆಂಡತಿಯರನ್ನು ಕೊಲ್ಲುವುದೂ ನಡೆಯುತ್ತದೆ. ನಾನು ಅಲ್ಲಿದ್ದಾಗ ಸಂಗೀತ ಶಿಕ್ಷಕಿಯೊಬ್ಬಳನ್ನು ಆಕೆಯ ಗಂಡ ಕಬ್ಬಿಣದ ಸಲಾಕೆಯಿಂದ ತಲೆಗೆ ಹೊಡೆದು ಕೊಂದು ಹೆಣವನ್ನು ಮಹಡಿಯ ಮೆಟ್ಟಿಲ ಬಳಿ ಹಾಕಿ, ಆಕೆ ಮಹಡಿಯಿಂದ ಕಾಲು ಜಾರಿ ಬಿದ್ದು ಅಪಘಾತದಿಂದ ಸತ್ತಳೆಂದು ಸಾಧಿಸಲು ಹವಣಿಸುತ್ತಿದ್ದನು. ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವಿ ಪಡೆದ ಈತನು ಈಗ ರಿಯಲ್ ಎಸ್ಟೇಟ್ ಕನ್ಸಲೆಂಟ್ ಆಗಿ ಸಾಕಷ್ಟು ಶ್ರೀಮಂತನೂ ಆಗಿದ್ದಾನೆ. ಆದರೆ ಪೋಲಿಸರ ಸಂಶೋಧನೆಯಲ್ಲಿ ಈತನೇ ಕೊಲೆಗಾರ. ಅಡಿಗೆ ಮನೆಯಿಂದ ಮಹಡಿಯ ಮೆಟ್ಟಿಲುವರೆಗೆ ನೆತ್ತರ ಕಲೆಗಳಿವೆ. ಆತನ

ಕಾರಿನಿಂದಲೂ ರಕ್ತದ ಕಲೆಗಳಿರುವ ಬಟ್ಟೆ ದೊರಕಿದೆ. ಆಕೆಯ ಹೆಸರಿಗೆ ೪೮,೦೦೦ ಡಾಲರುಗಳ ಇನ್ಸ್ಯುರೆನ್ಸ್ ಪಾಲಿಸಿ ಇದ್ದು ಆಕೆ ಸತ್ತರೆ ಈ ಹಣ ದ್ವಿಗುಣಗೊಂಡು ಆತನಿಗೆ ದೊರೆಯುತ್ತದೆ (ಪು. ೧೦೬).

ಸಾರಾ ಅವರು ಮೂರ್ತಿರಾವ್ ಮತ್ತು ಸ್ವಾಮಿಯವರಿಗಿಂತಲೂ ಭಿನ್ನರಾಗಿ ಅಮೆರಿಕದಲ್ಲಿನ ವ್ಯವಹಾರಿಕ ಜಗತ್ತು ಮಹಿಳೆಯರ ಪಾಲಿಗೆ ಹೇಗೆ ಕಂಟಕಪ್ರಾಯವಾಗಿದೆ ಎಂಬುದರತ್ತ ಒತ್ತುಕೊಡುತ್ತಾರೆ. ಸ್ತ್ರೀಪರ ಚಿಂತಕಿಯಾಗಿ ಸಾರಾ ಈ ರೀತಿ ಆರ್ಥಿಕ ರಾಜಕಾರಣವನ್ನು ಮಹಿಳೆಯರ ನೆಲೆಯಲ್ಲಿ ಅರಿಯಲು ಯತ್ನಿಸುವುದು ಸಹಜವಾಗಿದೆ.

ಒಟ್ಟಾರೆಯಾಗಿ ಅಮೆರಿಕೆಯ ಆರ್ಥಿಕ ಬೆಳವಣಿಗೆಯಲ್ಲಿ ಹಣ ಗಳಿಕೆಯಲ್ಲಿ ಎಂತಹ ರಾಜಕಾರಣಗಳು ನಡೆಯುತ್ತವೆ ಎಂಬುದನ್ನು ಈ ಪ್ರವಾಸ ಕಥನಗಳ ಮೂಲಕ ತಿಳಿಯಬಹುದಾಗಿದೆ. ಅಲ್ಲಿನ ಪತ್ರಿಕೆಗಳಲ್ಲಿ ಹೆಚ್ಚು ಜಾಹಿರಾತುಗಳೇ ಗೋಚರಿಸುತ್ತವೆ ಎಂಬುದೂ ಸಹ ಅಮೆರಿಕದ ವ್ಯವಹಾರ ಜಗತ್ತಿನ ಸಾರ್ವಭೌಮತೆಯನ್ನು ತೋರುವ ಸಂಗತಿಯಾಗಿದೆ. ಅಮೆರಿಕದ ಮೂರು ಪ್ರವಾಸ ಕಥನಗಳಲ್ಲಿ ಲೇಖಕರು ಭಿನ್ನ ದೃಷ್ಟಿಯಲ್ಲಿ ಅಲ್ಲಿನ ಆರ್ಥಿಕ ರಾಜಕಾರಣವನ್ನು ತೋರಿಸುವುದರಿಂದ ಆ ದೇಶದ ಬಗೆಗಿನ ಅರ್ಥಗ್ರಹಿಕೆಯನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಾಗುತ್ತದೆ.

### ೩.೨ ಶಸ್ತ್ರಾಸ್ತ್ರದ ರಾಜಕಾರಣ ಹಾಗೂ ಯುದ್ಧನೀತಿ

ಅಮೆರಿಕದ ಆರ್ಥಿಕ ರಾಜಕಾರಣದ ಮುಖವೆಂದರೆ ಅದರ ಯುದ್ಧೋದ್ಯಮ. ಅದು ಮೂಲತಃ ಯುದ್ಧಕೋರ, ಸರ್ವಾಧಿಕಾರಿ ದೇಶ. ಬಡದೇಶಗಳನ್ನು ಹಿಂಸಿಸುವ, ಅಲ್ಲಿನ ಸಂಪತ್ತನ್ನು ದೋಚುವ ಪರಂಪರೆಯನ್ನು ಹಿಂದಿನಿಂದಲೂ ರೂಢಿಸಿಕೊಂಡಿರುವ ದೇಶ. ಜಗತ್ತಿಗೆ ತನ್ನಲ್ಲಿರುವ ಮಿಲಿಟರಿ ಶಕ್ತಿಯಿಂದ ಬೆದರಿಸಿ ಹಿಂಸಿಸಿ ಅಲ್ಲಿನ ನಿಸರ್ಗ ಸಂಪತ್ತನ್ನು ದೋಚುವ ಮೂಲಕ ಕ್ರೂರವಾಗಿ ಅದು ಬೆಳೆದಿದೆ. ವೈಯಕ್ತಿಕ ರಕ್ಷಣೆಗೆ ಶಸ್ತ್ರಾಸ್ತ್ರ ಹೊಂದಿರುವ ಅಮೆರಿಕನ್ನರಲ್ಲಿ ಕೆಲವರು ಅಮಾಯಕರನ್ನು ಕೊಲ್ಲುವ ಪ್ರವೃತ್ತಿ ತೋರುತ್ತಾರೆ. ಇಂತಹ ಕೊಲೆಗಳನ್ನು ತಡೆಗಟ್ಟಲು ಅಲ್ಲಿನ ಸರ್ಕಾರ ಶಸ್ತ್ರಾಸ್ತ್ರಗಳನ್ನು ನಿಷೇಧಿಸಲು ಹಿಂದೇಟು ಹಾಕುತ್ತಿದೆ ಎಂಬುವುದನ್ನು ಪ್ರವಾಸ ಕಥನಗಳು ತಿಳಿಸುತ್ತವೆ. ಅಮೆರಿಕನ್ ಆರ್ಥಿಕ, ರಾಜಕಾರಣದ ಬದುಕಿನಲ್ಲಿ ಶಸ್ತ್ರಾಸ್ತ್ರಗಳ ಪಾತ್ರವನ್ನು ಈ ಅಧ್ಯಾಯದಲ್ಲಿ ಚರ್ಚಿಸಲು ಯತ್ನಿಸಲಾಗುವುದು.

ಮೊದಲು ಅಮೆರಿಕದ ವ್ಯಾಪಾರಸ್ಥರು ತಮಗೆ ಬೇಕಾದ ದೇಶಕ್ಕೆ ನುಗ್ಗುತ್ತಾರೆ. ಮಾರುಕಟ್ಟೆ ವಶಪಡಿಸಿಕೊಳ್ಳುತ್ತಾರೆ. ಅಲ್ಲಿನ ನೈಸರ್ಗಿಕ ಸಂಪತ್ತನ್ನು ಡಾಲರ್ ಲೆಕ್ಕದಲ್ಲಿ ಕೊಳ್ಳೆ ಹೊಡೆಯುತ್ತಾರೆ. ಅವರಿಗೆ ತೊಂದರೆಯಾದಾಗ ಆ ದೇಶದ ಯುದ್ಧ ವಿಮಾನಗಳು, ಮಿಲಿಟರಿ ಬಲ, ಶಸ್ತ್ರಾಸ್ತ್ರಗಳು ಅಲ್ಲಿ ಪ್ರವೇಶಿಸುತ್ತವೆ. ಅಮಾಯಕರ ಕೊಲೆಗಳು ನಡೆಯುತ್ತವೆ. ಬಾಹ್ಯ ಪ್ರಪಂಚದಲ್ಲಿ ನಡೆಯುವ ಈ ವಿದ್ಯಮಾನಗಳು ಆಂತರಿಕವಾಗಿ ದೇಶದ ಒಳಗೆ ಕೂಡ ನಡೆಯುತ್ತವೆ. ಅವುಗಳ ಸ್ವರೂಪವನ್ನು ಆ ದೇಶದ ಪ್ರವಾಸ ಕಥನಗಳು ಚಿತ್ರಿಸುವ ಪ್ರಯತ್ನ ಮಾಡುತ್ತವೆ. ಆಂತರಿಕವಾಗಿ ನಡೆಯುವ ಇಂತಹ

ಅಮಾಯಕರ ಕೊಲೆಗಳನ್ನು ತಡೆಗಟ್ಟಲು ಅಲ್ಲಿನ ಸರ್ಕಾರ ಕ್ರಮ ಕೈಗೊಳ್ಳದೇ ಇರುವುದಕ್ಕೆ ಕಾರಣವೇನು? ಅಮೆರಿಕನ್ನರ ಮನಸ್ಥಿತಿ ಎಂತಹುದು ಎಂಬ ವಿಷಯವನ್ನು ಪ್ರವಾಸ ಕಥನಗಳು ತಿಳಿಸುತ್ತವೆ.

ಅಮೆರಿಕದ ಯುದ್ಧ ದಾಹ ಎಂತಹುದು ಎಂಬುದನ್ನು ಕೆ. ಗಿರೀಶ್ ಅವರ ಅಮೆರಿಕ ಅಂತರಂಗ ಕೃತಿಯು ಅನಾವರಣಗೊಳಿಸುತ್ತದೆ.[೧] "ಅಮೆರಿಕ ಯುದ್ಧ ನಡೆಸುವ ಎಲ್ಲಾ ದೇಶಗಳಲ್ಲೂ ಅದು ಮುಖ್ಯವಾಗಿ ನಾಗರಿಕ ಪ್ರದೇಶಗಳ ಮೇಲೆ ಆಹಾರ ಉತ್ಪಾದಿಸುವ ಕೇಂದ್ರಗಳ ಮೇಲೆ, ಆರ್ಥಿಕ ಕೇಂದ್ರಗಳ ಮೇಲೆ ರಸಾಯನಿಕಗಳನ್ನು, ಬಾಂಬ್‌ಗಳನ್ನು ಸಿಡಿಸುತ್ತದೆ. ಯುದ್ಧ ನಿಂತರೂ ಆ ದೇಶ ಮುಂದಿನ ಒಂದು ಶತಮಾನದ ಆದಾಯವನ್ನು ಯುದ್ಧದ ಭೀಕರ ಪರಿಣಾಮಗಳನ್ನು ಸರಿಯಾಗಿಸಲು ವಿನಿಯೋಗಿಸಬೇಕು. ಆದ್ದರಿಂದ ಅಮೆರಿಕ ಒಂದು ಬಾರಿ ಯುದ್ಧ ನಡೆಸಿದರೆ ಅದು ಮುಗಿಯದ ಯುದ್ಧ, ತೀರದ ಬವಣೆ, ನಿತ್ಯದ ಗೋಳು, ಸಾವಿನ ಬದುಕು. ಇರಾಕ್ ಮೇಲಿನ ದಾಳಿಗೆ ಅಮೆರಿಕ ಖರ್ಚು ಮಾಡಿದ ಹಣ ಜನಕಲ್ಯಾಣಕ್ಕಾಗಿ ವಿನಿಯೋಗವಾಗಿದ್ದರೆ, ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರದಂತಹ ೪ ರಾಜ್ಯಗಳ ಜನರಿಗೆ ಒಂದೊಂದು ಸ್ವಂತ ಮನೆ ಕಟ್ಟಿಸಿ, ಒಂದೊಂದು ಕಾರುಗಳನ್ನು ಕೊಡಿಸಬಹುದಿತ್ತು. ಇತಿಯೋಪಿಯಾದಂತಹ ಇಡೀ ದೇಶದ ಜನರಿಗೆ ಬದುಕು ಕೊಡಬಹುದಿತ್ತು. ಆದರೆ ಸ್ವತಃ ಹೆಣದ ರಾಶಿಗಳ ಮೇಲೆ, ತೃತಿಯ ಜಗತ್ತಿನ ಜನತೆಯ ದೇಹದ ರಕ್ತಮಾಂಸ ತಿಂದು ಬೆಳೆದು ನಿಂತಿರುವ ಅಮೆರಿಕ ಸರ್ಕಾರಕ್ಕೆ ಜೀವಕ್ಕಿಂತ ಕೊಲೆ ಮುಖ್ಯ. ಬದುಕಿಗಿಂತ ನರಳಾಟ ಮುಖ್ಯ".

ಗಿರೀಶ್ ಅವರ ಮಾಹಿತಿ ಎಂತಹವರನ್ನು ಕೂಡ ಒಂದು ಕ್ಷಣ ವಿಸ್ಮಯಗೊಳಿಸುತ್ತದೆ. ಅಮೆರಿಕ ದೇಶ ಎಂತಹ ಪಾಪಕೃತ್ಯಗಳನ್ನು ನಡೆಸುತ್ತಿದ್ದರೂ ಕೂಡ ಪ್ರತಿರೋಧ ಒಡ್ಡುವ ಶಕ್ತಿ ಯಾವ ದೇಶಗಳಲ್ಲೂ ಇರದಿರುವುದು ಖೇದದ ಸಂಗತಿ. ಬಾಹ್ಯವಾಗಿ ನಡೆಯುವ ಇಂತಹ ಕ್ರೌರ್ಯದ ವಿಷಯಗಳನ್ನು ಸಮೂಹ ಮಾಧ್ಯಮ ಪತ್ರಿಕೆಗಳ ಮೂಲಕ ಪಡೆದರೆ, ಆಂತರಿಕವಾಗಿ ನಡೆಯುವ ಇಂತಹ ರಕ್ತಪಿಪಾಸಿತನದ ಸಂದರ್ಭಗಳನ್ನು ಪ್ರವಾಸ ಕಥನಗಳ ಮೂಲಕ ನೋಡುವ ಪ್ರಯತ್ನ ಮಾಡಬಹುದಾಗಿದೆ.

ಎ.ಎನ್. ಮೂರ್ತಿರಾವ್ ಅವರು ತಮ್ಮ ಪ್ರವಾಸ ಕಥನದಲ್ಲಿ 'ಕೊಂದು ಕೂಗುವ ಹಿಂಸಕರು' ಎಂಬ ಅಧ್ಯಾಯ ಬರೆಯುತ್ತಾರೆ. ಅದರಲ್ಲಿ ಶಸ್ತ್ರಾಸ್ತ್ರಗಳು ಬಳಕೆಯಾಗುವ ಬಗೆಗೆ ಬರೆಯುತ್ತ, ಅಮೆರಿಕದ ವೃತ್ತಪತ್ರಿಕೆಗಳಲ್ಲಿ ಕೆಟ್ಟಸುದ್ದಿ ಇಲ್ಲದೇ ಇರುವ ದಿನವೇ ಇಲ್ಲ ಎಂದು ಅವರು ಹೇಳುತ್ತಾರೆ. ಲೇಖಕರು ಅಮೆರಿಕನ್ ಪತ್ರಿಕೆಯ ಕೆಲವು ಹಿಂಸಾತ್ಮಕ ಸನ್ನಿವೇಶಗಳನ್ನು ತರುತ್ತಾರೆ ಅದರಲ್ಲಿ ಒಂದು ಹೀಗಿದೆ:

"ಈ ಪೇಪರುಗಳಲ್ಲಿ ಖೂನಿ ಲೈಂಗಿಕ ಅತ್ಯಾಚಾರ ಮುಂತಾದ ಅಸಹ್ಯ ಮತ್ತು ಭಯಂಕರ ವಾರ್ತೆ ಇಲ್ಲದಿದ್ದ ದಿನವೇ ಇಲ್ಲ. ನಿನ್ನೆ ಯಾವನೋ ಒಬ್ಬ ಏಳು ಜನರನ್ನು ತನ್ನ ಮನೆಯವರೇ ನಾಲ್ಕು ಜನ, ನೆರೆಮನೆಯವರು ಮೂರು ಜನರನ್ನು ಕೊಲೆ ಮಾಡಿದನಂತೆ. ೨೫ ವರ್ಷದ ಯುವಕನೊಬ್ಬ ಬೆಳಿಗ್ಗೆ ಎದ್ದು ಕಬ್ಬಿಣದ ದಂಡವನ್ನು ಅಥವಾ ಅಂಥಾದ್ದು ಮತ್ತೇನನ್ನೋ ಹಿಡಿದುಕೊಂಡು ೬೧ ಕಾರುಗಳನ್ನು ಮನಸಾರೆ ಬಡಿದು ಹಾಳು ಮಾಡಿದ. ಅಷ್ಟೊತ್ತಿಗೆ ಪೋಲಿಸಿನವರು ಅವನನ್ನು ಹಿಡಿದರು. 'ಇದೇಕೆ ಹೀಗೆ

ಮಾಡಿದೆ'? ಎಂದು ಕೇಳಿದಾಗ ಏನಾದರೂ ಸ್ವಲ್ಪ ಗಲಾಟೆ ಮಾಡೋಣ ಎನಿಸಿತು ಎಂದ" (ಪು. ೭೭ ಮತ್ತು ೭೮).

ಈ ಸನ್ನಿವೇಶವನ್ನು ಗಮನಿಸಿದಾಗ ಇದು ಅಮೆರಿಕದ ಕತೆ ಮಾತ್ರವಲ್ಲ ಅನಿಸುತ್ತದೆ. ಭಾರತದಲ್ಲೂ ಸಹ ಇಂತಹ ಕೊಲೆಗಳು ನಡೆದಿರುವುದನ್ನು ನೆನೆಯಬಹುದಾಗಿದೆ. ನೇಪಾಳದ ರಾಜಮನೆತನದಲ್ಲಿ ನಡೆದ ಹಿಂಸಾಕೃತ್ಯ, ಬಿ.ಜೆ.ಪಿ ಮುಖಂಡ ಪ್ರಮೋದ್ ಮಹಾಜನ್‌ರವರ ಹತ್ಯೆ, ಪ್ರಭಾಕರ್ ಕೋರೆಯವರ ಹತ್ಯೆ ಯತ್ನ ಇನ್ನೂ ಮುಂತಾದ ಪ್ರಕರಣಗಳು ನಮ್ಮಲ್ಲೂ ನಡೆದಿವೆ. ಕೊಲೆ ಹಿಂಸೆಗಳಿಗೆ ಜನರ ಗುಣಸ್ವಭಾವ ಮಾತ್ರ ಕಾರಣವಲ್ಲ. ಬಡತನ, ನಿರುದ್ಯೋಗ, ಅಸಮಾನತೆ, ಅತೃಪ್ತಿ ಇವುಗಳಿಂದ ಜನ ಅನೇಕ ಸಲ ಕದಿಯುತ್ತಾರೆ. ದರೋಡೆ ಮಾಡುತ್ತಾರೆ. ಇವುಗಳಿಂದ ಸಿಕ್ಕಿಬೀಳುವುದನ್ನು ತಪ್ಪಿಸಲು ಕೊಲೆ ಮಾಡುತ್ತಾರೆ. ದ್ವೇಷಕ್ಕಾಗಿಯೂ ಮುಯ್ಯಿ ತೀರಿಸಿಕೊಳ್ಳಲು ಕೊಲೆ ಮಾಡುತ್ತಾರೆ. ಇವನು ಬದುಕಿದ್ದರೆ ನಾನು ಲಾಭ ಗಳಿಸಲಾಗುವುದಿಲ್ಲ, ಎಂದೋ ಚುನಾವಣೆಯಲ್ಲಿ ಗೆಲ್ಲಲಾರೆ ಎಂದೋ, ಆಸ್ತಿಯಲ್ಲಿ ಪಾಲು ಸಿಗುವುದಿಲ್ಲ ಎಂದೋ, ಮಾತ್ಸರ್ಯ, ಸ್ವಾರ್ಥಗಳಿಂದ ಪ್ರೇರಿತರಾಗಿ ಕೊಲೆ ಮಾಡುತ್ತಾರೆ. ಈ ವಿಷಯದಲ್ಲಿ ಭಾರತ ಅಮೆರಿಕ ಬಹಳ ಭಿನ್ನವಲ್ಲ.

ಬಿ.ಜಿ.ಎಲ್. ಸ್ವಾಮಿಯವರು ಅಮೆರಿಕೆಯಲ್ಲಿ ಶಸ್ತ್ರಾಸ್ತ್ರಗಳು ಉಪಯೋಗವಾಗುತ್ತಿರುವ ರೀತಿಯನ್ನು 'ರಾಕೆಟ್ ವ್ಯಾಪಾರ' ಎಂಬ ಅಧ್ಯಾಯದಲ್ಲಿ ತಮಗಾದ ಅನುಭವದ ಮೂಲಕ ಹೇಳುತ್ತಾರೆ. ಅಮೆರಿಕದ ಪತ್ರಿಕೆಗಳಲ್ಲಿ ವ್ಯಕ್ತವಾದಂತಹ ಕೆಲವು ಅಂಶಗಳನ್ನು ಲೇಖಕರು ದಾಖಲಿಸುತ್ತಾರೆ. ಅಂತಹ ಒಂದು ಉಲ್ಲೇಖ ಹೀಗಿದೆ:

"ಅಮೆರಿಕದ ಯಾವ ದಿನಪತ್ರಿಕೆ ತೆಗೆದುಕೊಂಡರೂ ದರೋಡೆ ಜನರ ಆಸ್ತಿ-ಪಾಸ್ತಿ ಪ್ರಾಣಗಳಿಗೆ ಊನ ಬಂದ ಸಂಗತಿಗಳು ಒಂದೆರಡಾದರೂ ಇಲ್ಲದೇ ಇರುವುದಿಲ್ಲ. ಜೀವನೋಪಾಯದ ದೃಷ್ಟಿಯಿಂದ ಹಣ ಗಳಿಸುವ ಈ ತೆರದ ಹೊಂಚಿಕೆಗೆ ರಾಕೆಟ್ ಎಂದು ಹೆಸರು ಅಮೆರಿಕನ್ನರಿಟ್ಟಿರುವುದು. ಷಿಕಾಗೋ ಕೊಲರ್‍ಯಾಡೊ ಮೊದಲಾದ ಮಧ್ಯ ಪಶ್ಚಿಮದಲ್ಲಿಯ ನಗರಗಳಲ್ಲಿ ಮನುಷ್ಯ ಷಿಕಾರಿಗೆ ಮೊದಲಿಲ್ಲ, ಕೊನೆಯಿಲ್ಲ. ಇಲ್ಲಿನ ಜನ ಪಿಸ್ತೂಲು, ಬಂದೂಕುಗಳಿಂದ ತಮಗೆ ಆಗದಿರುವವರ ತಲೆ ಹಾರಿಸದಿರುವುದನ್ನು ಕಂಡರೆ ಅಥವಾ ಕೋಟ್ಯಾಧೀಶ್ವರರ ಎಳೆ ಮಕ್ಕಳ ಅಪಹರಣವಾಗದಿದ್ದುದನ್ನು ಕಂಡರೆ, ಅಥವಾ ವ್ಯಭಿಚಾರಿಣಿ ಗೃಹಗಳ ಕೊರತೆ ಕಂಡು ಬಂದರೆ ಅದು ಮಹಾ ಆಶ್ಚರ್ಯ. ಇಲ್ಲಿ ಖಾತ್ರಿಯಾಗಿ ಲಾಭ ಕೊಡುವಂಥ ಒಂದೇ ಒಂದು ಕೆಲಸವೆಂದರೆ ರಾಕೆಟ್. ಇದನ್ನು ಒಂದು ಕಸುಬು ಎಂದು ಕರೆಯಬಹುದಾಗಿದ್ದರೆ, ಅಮೆರಿಕದಲ್ಲಿ ರಾಕೆಟ್ ಕೈವಾಡಕ್ಕೊಳಪಡದ ಮಾನವ ವ್ಯಾಪಾರಗಳಿಲ್ಲವೆಂದರೂ ಅತಿಶಯೋಕ್ತಿಯಿಲ್ಲ" (ಪು. ೮೪).

ಈ ಉಲ್ಲೇಖದಿಂದ ಅಮೆರಿಕದಲ್ಲಿನ ಶಸ್ತ್ರಾಸ್ತ್ರಗಳು ಹೇಗೆ ತಮ್ಮ ಕಾರ್ಯನಿರ್ವಹಿಸುತ್ತವೆ, ಅಲ್ಲಿನ ಹಿಂಸೆಯ ಸ್ವರೂಪಗಳೆಂಥವು ಎಂಬುದು ತಿಳಿಯುತ್ತದೆ. ಆಧುನಿಕ ಯುಗದಲ್ಲಿ ಜಗತ್ತಿನ ಪ್ರತಿಯೊಂದು

ದೇಶಗಳು ಒಂದಿಲ್ಲ ಒಂದು ರೀತಿಯಲ್ಲಿ ಈ ಸಮಸ್ಯೆಯಲ್ಲಿವೆ. ಆದರೂ ಶಸ್ತ್ರಾಸ್ತ್ರಗಳನ್ನು ಬಳಸುವುದು ಒಂದು ಜೀವನ ಶೈಲಿಯಾಗಿ ಮಾರ್ಪಡುತ್ತಿರುವುದು ವಿಪರ್ಯಾಸದ ಸಂಗತಿ. ರಾಕೆಟ್ ಎಂಬ ವಿಶೇಷಣದ ಪದವು ಮೋಸಗೊಳಿಸಿ ಹಣ ಗಳಿಸುವ ಒಂದು ವ್ಯವಹಾರವಾಗಿ ಅಮೆರಿಕದಲ್ಲಿ ಬೆಳೆದಿದೆ ಎಂಬುದನ್ನು ಲೇಖಕರು ಹೇಳುತ್ತಾರೆ.

ಸಾರಾ ಅಬೂಬಕ್ಕರ್ ಅವರು ತಮ್ಮ ಪ್ರವಾಸ ಕಥನದಲ್ಲಿ ಕೋವಿ ಹಿಂಸೆಯ ಕುರಿತು ಚರ್ಚಿಸುತ್ತಾರೆ. ಅಮೆರಿಕದಲ್ಲಿ ಸಾಮಾನ್ಯ ವ್ಯಕ್ತಿಯೂ ಸಹ ಅಂಗಡಿಯೊಳಕ್ಕೆ ಹೊಕ್ಕು ಕೋವಿ ಮತ್ತು ಪಿಸ್ತುಲ್ ಖರೀದಿಸಲು ಯಾವುದೇ ನಿರ್ಬಂಧವಿಲ್ಲ. ಅವುಗಳ ಬಳಕೆಯಲ್ಲಿ ಸರ್ಕಾರದ ಯಾವುದೇ ಹತೋಟಿಯಿಲ್ಲ ಎಂದು ಸಾರಾ ಟೀಕಿಸುತ್ತಾರೆ. ಕೋವಿಗಳು ಶಾಲಾಬಾಲಕರ ಕೈಯಲ್ಲಿ ಬಳಕೆಯಾಗಿ ಮುಗ್ಧಮಕ್ಕಳೂ ಸಹ ಬಲಿ ಯಾಗುತ್ತಿದ್ದಾರೆ. ಮುಗ್ಧ ಮಹಿಳೆಯರನ್ನು ಕ್ಷುಲ್ಲಕ ಕಾರಣಗಳಿಗಾಗಿ ಕೊಲೆ ಮಾಡಲಾಗುತ್ತಿದೆ ಎಂದು ಸಾರಾ ವಿಷಾದ ವ್ಯಕ್ತಪಡಿಸುತ್ತಾರೆ. ಸರತಿ ಸಾಲಿನಲ್ಲಿ ನಿಲ್ಲಲು ಸ್ಥಳ ನೀಡಲಿಲ್ಲವೆಂಬ ಕಾರಣಕ್ಕಾಗಿ ಕೊಲೆ ನಡೆದಿರುವುದನ್ನು, ಶಿಕ್ಷಕರು ಶಿಕ್ಷೆ ನೀಡಿದರೆಂಬ ಕಾರಣಕ್ಕೆ ಅವರನ್ನೇ ಕೊಂದಿದ್ದನ್ನು ಲೇಖಕಿ ವಿಷಾದದಿಂದ ಕಥನದಲ್ಲಿ ದಾಖಲಿಸುತ್ತಾರೆ. 

ಕೋವಿ ಹಿಂಸೆಯ ಕಾರಣಗಳಿಗೆ ಸಾರಾ ಅಲ್ಲಿನ ಸರಕಾರವನ್ನು ನೇರ ಹೊಣೆ ಮಾಡುತ್ತಾರೆ. ಅದರ ವಿರುದ್ಧ 'ಮಿಲಿಯನ್ ತಾಯಂದಿರ ಮೆರವಣಿಗೆ' ಎಂಬ ಸಂಘಟನಾತ್ಮಕ ರ‍್ಯಾಲಿ ನಡೆಸುವುದನ್ನು ಬೆಂಬಲಿಸುತ್ತಾರೆ. ಅಮೆರಿಕದಲ್ಲಿ ಕೋವಿ ತಯಾರಿಕೆ ಮತ್ತು ಮಾರಾಟ ಕ್ಷೇತ್ರ ಯಹೂದ್ಯರ ಕೈಯಲ್ಲಿದೆ. ಅಮೆರಿಕದ ಹೆಚ್ಚಿನ ಶ್ರೀಮಂತರೂ ಅವರೆ ರಾಜಕಾರಣಿಗಳು ಹೆಚ್ಚಿನವರು ಅವರೆ ಆಗಿದ್ದಾರೆ. ಕೋವಿ ನಿಷೇಧಿಸುವಲ್ಲಿ ಅಲ್ಲಿನ ರಾಜಕಾರಣಿಗಳು ಆಸಕ್ತಿ ವಹಿಸುತ್ತಿಲ್ಲ ಎಂಬುದನ್ನು ಸಾರಾ ಸೂಚಿಸುತ್ತಾರೆ :

"ನಮ್ಮ ರಾಜಕಾರಣಿಗಳಲ್ಲಿ ಹೆಂಡದ ಲಾಬಿ ಇರುವಂತೆ ಅಮೆರಿಕನ್ ರಾಜಕಾರಣಿಗಳಲ್ಲಿ ಕೋವಿಲಾಬಿ ಇದೆ. ಸರ್ಕಾರದಲ್ಲಿ ಯಹೂದ್ಯರ ಕೋವಿ ತಯಾರಕರ ಹಿಡಿತ ಬಲವಾಗಿರುವುದರಿಂದ ಪಾರ್ಲಿಮೆಂಟಿನಲ್ಲಿ ಕೋವಿ ನಿರ್ಬಂಧದ ಮಸೂದೆ ಅಂಗೀಕೃತವಾಗುವುದಿಲ್ಲ" (ಪು. ೧೦೫).

ಅಮೆರಿಕನ್ ಸರ್ಕಾರದಲ್ಲೂ ಸಹ ಪ್ರಬಲವಾದ ವರ್ಗ ತನ್ನ ಬಿಗಿಹಿಡಿತ ಸಾಧಿಸಿ ಅಮಾಯಕರ ರಕ್ತ ಹೀರುತ್ತಿದೆ. ಕೋವಿ ನಿರ್ಬಂಧದಲ್ಲಿ ಅವರು ಆಸಕ್ತಿವಹಿಸದೇ ಚುನಾವಣೆ ಸಂದರ್ಭದಲ್ಲಿ ಭಾರತದಲ್ಲಿ ಹೆಂಡ ಹಂಚುವಂತೆ ಅಲ್ಲಿ ಕೋವಿ ಹಂಚಲಾಗುತ್ತದೆ ಎಂಬುದು ತಿಳಿದು ಬರುತ್ತದೆ. ಹಾಗಾಗಿ ಯಾವುದೇ ದೇಶದ ರಾಜಕಾರಣವು ಪ್ರಭುತ್ವ ಸಾಧಿಸಲು ಆಮಿಷಗಳನ್ನು ಒಡ್ಡುತ್ತಲೇ ಇರುತ್ತವೆ ಎಂಬುದು ಇದರಿಂದ ತಿಳಿಯುತ್ತದೆ. ಲೇಖಕಿ ತುಪಾಕಿ ರಾಜಕೀಯವನ್ನು ನಿರ್ದಾಕ್ಷಿಣ್ಯವಾಗಿ ವಿರೋಧಿಸುವುದು ಕಂಡುಬರುತ್ತದೆ.

ಅಮೆರಿಕವು ಪ್ರಪಂಚದ ಅನೇಕ ದೇಶಗಳ ಮೇಲೆ ದಾಳಿ ನಡೆಸಿದೆ. ಅಂತಹ ನತದೃಷ್ಟ ದೇಶಗಳಲ್ಲಿ ಪ್ರಮುಖವಾದವುಗಳು, ವಿಯೆಟ್ನಾಂ, ಸೊಮಾಲಿಯಾ, ಕ್ಯೂಬ, ನೈಜಿರಿಯಾ, ಇರಾಕ್-ಇರಾನ್, ಜಪಾನ್

ಮೊದಲಾದವುಗಳು ಈ ಎಲ್ಲಾ ದೇಶಗಳು ಅಮೆರಿಕದ ದಾಳಿಯಿಂದ ತತ್ತರಿಸಿದಂತವುಗಳು. ಅಮೆರಿಕದ ಸಂಪತ್ತು ಗಳಿಸುವ ವಿಧಾನವನ್ನು ಗಿರೀಶ್ ಅವರು ತಮ್ಮ ಕೃತಿ ಅಮೆರಿಕ ಅಂತರಂಗದಲ್ಲಿ ಹೀಗೆ ಹೇಳುತ್ತಾರೆ.[೨] "ಪ್ರಪಂಚದ ಒಟ್ಟು ಜನಸಂಖ್ಯೆಯಲ್ಲಿ ಅಮೆರಿಕದ ಜನಸಂಖ್ಯೆ ೫.೭ ರಷ್ಟಿದೆ. ಇಷ್ಟು ಕಡಿಮೆ ಸಂಖ್ಯೆಯ ಅಮೆರಿಕದಲ್ಲಿ ಪ್ರಪಂಚದ ಶೇಕಡ ೫೦ ರಷ್ಟು ಸಂಪತ್ತು ಕೇಂದ್ರೀಕರಣಗೊಂಡಿದೆ. ಪ್ರಪಂಚದ ಚಿನ್ನದ ಸಂಗ್ರಹಣೆಯಲ್ಲಿ ಶೇಕಡ ೫೫ ರಷ್ಟು ಅಮೆರಿಕದ ಕೈಯಲ್ಲಿದೆ. ಪ್ರಪಂಚದಲ್ಲಿರುವ ಪ್ರತಿ ೫ ಆಟೋಮೊಬೈಲ್‌ಗಳಲ್ಲಿ ಮೂರನ್ನು ಅಮೆರಿಕ ಬಳಸುತ್ತಿದೆ. ಉತ್ಪಾದನ-ಮಾರುಕಟ್ಟೆ-ಲಾಭ ಎಂಬ ಮೂರು ಅಂಶಗಳ ಮೇಲೆ ಅಮೆರಿಕದ ಬದುಕು ಉಸಿರಾಟ ನಿಂತಿದೆ. ಮಾರುಕಟ್ಟೆಯ ಅಗತ್ಯಕ್ಕೆ ತಕ್ಕಂತೆ ಉತ್ಪಾದನೆ ಮಾಡಿದರೆ ಉತ್ಪಾದನೆಗೆ ತಕ್ಕಷ್ಟು ಲಾಭ ಬರುತ್ತದೆ. ಆದರೆ ಅಧಿಕ ಲಾಭದ ದುರಾಸೆಗೆ ಬಿದ್ದು ಹೆಚ್ಚೆಚ್ಚು ಉತ್ಪಾದನೆ ಮಾಡುತ್ತಾ ಹೋದರೆ ಮಾರುಕಟ್ಟೆಯಲ್ಲಿ ಕಡಿತ, ಲಾಭಾಂಶದಲ್ಲೂ ಕಡಿತವಾಗುತ್ತದೆ. ಆಗ ತಮ್ಮ ಉತ್ಪಾದನೆಗಾಗಿ ಹೊಸ ಹೊಸ ಮಾರುಕಟ್ಟೆಗಳನ್ನು ಹುಡುಕುತ್ತಾರೆ.

ಈ ರೀತಿ ಮಾರುಕಟ್ಟೆಯ ಲಾಭಾಂಶದ ತಿಕ್ಕಾಟದ ಕಾರಣದಿಂದಾಗಿ ೧೯೧೪-೧೮ರ ನಡುವೆ ಪ್ರಥಮ ಮಹಾಯುದ್ಧ ನಡೆಯಿತು. ಅಲ್ಲಿ ಅಮೆರಿಕ ಎರಡೂ ಬಣಗಳಿಗೂ ತನ್ನ ಶಸ್ತ್ರಾಸ್ತ್ರಗಳನ್ನು ಪೂರೈಸುವ ರಾಷ್ಟ್ರವಾಗಿ ಮಾರ್ಪಟ್ಟಿತು ಅದೇ ರೀತಿ ೨ನೇ ಮಹಾಯುದ್ದದಲ್ಲಿ ಅಮೆರಿಕ ತನ್ನ ಕರಾಳ ಮುಖವನ್ನು ಮತ್ತಷ್ಟು ವಿಕಾರಗೊಳಿಸಿ ತೋರಿಸಿತು. ಅಂದಿನಿಂದ ಈವರೆಗೂ ಅಮೆರಿಕದ ಯುದ್ದ ಪಿಪಾಸಿತನ ದಾಹ ತಣಿಯುವ ಯಾವುದೇ ಲಕ್ಷಣಗಳು ಕಾಣುತ್ತಿಲ್ಲ. ಏಕೆಂದರೆ ಇತ್ತೀಚಿಗಷ್ಟೇ ನಡೆದ ವರ್ಜಿನಿಯಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಕೋವಿ ಹಿಡಿದು ವಿದ್ಯಾರ್ಥಿಗಳನ್ನು ಕೊಂದ ದುರಂತ ಇದಕ್ಕೆ ಉದಾಹರಣೆ. ಪದೇ ಪದೇ ನಡೆಯುವ ಇಂತಹ ಕ್ರೂರ ಘಟನೆಗಳಿಗೆ ಅಮೆರಿಕದಲ್ಲಿನ ಸಾಮಾಜಿಕ, ರಾಜಕೀಯ, ಆರ್ಥಿಕ ವ್ಯವಸ್ಥೆಯಲ್ಲಿನ ಹಲವು ಅಸಮಾಧಾನಗಳೂ ಕಾರಣ ಇರಬಹುದು. ಮುಖ್ಯವಾಗಿ ಅಲ್ಲಿನ ಸಾಮಾಜಿಕ ವ್ಯವಸ್ಥೆಯಲ್ಲಿ ಹಿಂಸೆ, ಅತೃಪ್ತಿ, ಖಿನ್ನತೆ ಬೇರೂರಿರುವುದೇ ಕಾರಣವೆನ್ನಬಹುದು. ಇದನ್ನು ಮೂವರೂ ಲೇಖಕರು ಸೂಕ್ಷ್ಮವಾಗಿ ಸೂಚಿಸುತ್ತಾರೆ. ಈ ಕಾರಣಕ್ಕಾಗಿ ಈ ಪ್ರವಾಸ ಕಥನಗಳನ್ನು ರಾಜಕೀಯ ಪ್ರಜ್ಞೆಯ ಕಥನಗಳು ಎಂದು ಕರೆಯಬಹುದು.

### ೩.೩. ಅಮೆರಿಕನ್ ರಾಜಕಾರಣದ ಕುರಿತು

ಜಗತ್ತಿನ ದೊಡ್ಡ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹೊಂದಿರುವ ದೇಶಗಳಲ್ಲಿ ಅಮೆರಿಕವೂ ಒಂದು. ಅದು ದ್ವಿಪಕ್ಷೀಯ ರಾಜಕೀಯ ವ್ಯವಸ್ಥೆಯನ್ನು ಹೊಂದಿದೆ. ಭಾರತವೂ ಕೂಡ ಜನಸಂಖ್ಯೆಯ ದೃಷ್ಟಿಯಿಂದ ಬಹುದೊಡ್ಡ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹೊಂದಿದ ದೇಶ. ಬಹುಪಕ್ಷ ಪದ್ಧತಿ ಇಲ್ಲಿದೆ. ಮುಂದುವರಿದ ರಾಷ್ಟ್ರಗಳ ಸಾಲಿನಲ್ಲಿ ಬರುವ ಅಮೆರಿಕದ ರಾಜಕೀಯವನ್ನು ತೃತೀಯ ಜಗತ್ತಿನ ಪ್ರಜಾಪ್ರಭುತ್ವದ ಹಿನ್ನೆಲೆಯಿಂದ ಬಂದ ಲೇಖಕರು ಹೇಗೆ ಗ್ರಹಿಸುತ್ತಾರೆ? ಎಂಬುದು ಕುತೂಹಲ ಹುಟ್ಟಿಸುತ್ತದೆ. ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳ ಮೂಲಕ ಲೇಖಕರು ಅಲ್ಲಿನ ರಾಜಕೀಯ ವ್ಯವಸ್ಥೆ ಗ್ರಹಿಸಿರುವ ಬಗೆಯನ್ನು ಈ ಭಾಗದಲ್ಲಿ ಚರ್ಚಿಸಬಹುದಾಗಿದೆ.

ಈ ಮೂರು ಪ್ರವಾಸ ಕಥನಗಳ ಲೇಖಕರಲ್ಲಿ ಎ.ಎನ್. ಮೂರ್ತಿರಾವ್ ಅವರಿಗಿಂತ ಸ್ವಾಮಿ ಹಾಗೂ ಸಾರಾ ಅವರು ರಾಜಕಾರಣದ ಚರ್ಚೆಯನ್ನು ಹೆಚ್ಚು ಮಾಡುತ್ತಾರೆ. ಮೂರ್ತಿರಾವ್ ಅವರಿಗೆ ರಾಜಕಾರಣದ ಚರ್ಚೆ ಏಕೆ ಮುಖ್ಯವೆನಿಸಿಲ್ಲವೊ ತಿಳಿಯುವುದಿಲ್ಲ. ನವೋದಯ ಪಂಥದ ಲೇಖಕರಾದ ಅವರಿಗೆ ರಾಜಕಾರಣಕ್ಕಿಂತ ಹೆಚ್ಚಾಗಿ ಅಲ್ಲಿನ ಜನಜೀವನ, ಸಂಸ್ಕೃತಿ, ಧರ್ಮ, ಶಿಕ್ಷಣ ನಿಸರ್ಗದ ರಮ್ಯತೆ, ಮುಖ್ಯವಾಗಿರುವುದು ಸಹಜವಾಗಿದೆ. ಆದುದರಿಂದ ಈ ಅಂಶಗಳಿಗೆ ಹೆಚ್ಚಿನ ಆದ್ಯತೆ ಅವರು ನೀಡಿರುವುದು ಸಹಜವಾಗಿದೆ.

ಬಿ.ಜಿ.ಎಲ್. ಸ್ವಾಮಿಯವರು ತಮ್ಮ ಪ್ರವಾಸ ಕಥನದಲ್ಲಿ 'ನನಗೂ ರಾಜಕೀಯಕ್ಕೂ ಕೋಣನಿಗೂ ಕಿನ್ನರಿಗೂ ಇರುವ ಸಂಬಂಧ' ಎಂದು ಪೀಠಿಕೆ ಹಾಕುತ್ತಾರೆ. ಆದರೆ ನಂತರ ಅಮೆರಿಕದ ರಾಜಕಾರಣಿಗಳು ಅಲ್ಲಿನ ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವ ರೀತಿಯಲ್ಲಿ ವರ್ತಿಸುತ್ತಾರೆ ಎಂಬ ವಿಷಯವನ್ನು ಹೇಳುತ್ತಾರೆ. ಅಮೆರಿಕದ ರಾಜಕೀಯ ಪಕ್ಷಗಳು ಚುನಾವಣೆ ಪ್ರಚಾರದಲ್ಲಿ ಜನರ ಆಶೋತ್ತರಗಳಿಗೆ ವಿರೋಧವೆಂಬಂತೆ ವರ್ತಿಸುತ್ತವೆ. ಮತಯಾಚನೆ ಮಾಡುವ ಬದಲಾಗಿ ಜೀವ ಬೆದರಿಕೆ ಹಾಕಿ ದರ್ಪವನ್ನು ತೋರಿಸುವ ಮೂಲಕ ಮತದಾರರ, ಸಾಮಾನ್ಯರ ಜೀವನಕ್ಕೆ ತೊಂದರೆಯುಂಟು ಮಾಡುತ್ತಿವೆ ಎಂಬುದನ್ನು ಲೇಖಕರು ಕಥನದಲ್ಲಿ ದಾಖಲಿಸುವ ಮೂಲಕ ಟೀಕಿಸುತ್ತಾರೆ. ಅಂತಹ ಒಂದು ಸಂದರ್ಭ ಸ್ವಾರಸ್ಯಕರವಾಗಿದೆ :

"ಡಾಕ್ಟರ್ ಹತ್ತಿರ ಬಂದ ಹೊಸಬನು ರಿಪಬ್ಲಿಕ್ ಪಕ್ಷದ ದೂತ. ರಾಜಕೀಯವೊಂದೇ ಇವನ ಕಸುಬು. ಅರ್ಥಾತ್ ಜೀವನೋಪಾಯ ಮಾರ್ಗ. ಕಸುಬನಿಗೆ ಅವಶ್ಯವಾಗಿರುವ ಗುಣಗಳೆಲ್ಲವೂ - ಭಂಡತನ, ಒರಟುತನ, ನಾಚಿಕೆಗೇಡಿತನ ಇವನಲ್ಲಿ ಇದ್ದವು. ಅಲ್ಲಿ ಕುಳಿತಿದ್ದ ನನ್ನನ್ನು ಗಮನಿಸಿ ಇವನಾರು ಡಾಕ್? ಎಂದ. ಅವನು ನನ್ನ ಗೆಳೆಯ ಔಷಧಕ್ಕಾಗಿ ಬಂದಿದ್ದಾನೆ. ನೀನಾರೋ? ನಾನಾರಾದರೇನು? ನನ್ನ ಹೆಸರನ್ನು ಕೇಳುತ್ತಿರುವ ಪಕ್ಷಕ್ಕೆ ಜನ ನನ್ನನ್ನು ಡಿಕ್ ಎನ್ನುತ್ತಾರೆ. ನೀನೂ ಹಾಗೆಯೇ ಕರಿಯಬಹುದು". ಇವನನ್ನು ಬೀದಿಗೆ ಒದ್ದು ಬಿಡಲೇ ಎನ್ನುವಷ್ಟು ಕೋಪ ಡಾಕ್ಟರ್‌ಗೆ ಬಂತು. ಆದರೆ ಡಿಕ್ಕನ ಎದೆಯಗಲವನ್ನು ನೋಡಿದೊಡನೆಯೇ ಒದೆಸಿಕೊಂಡು ಹೊರದೂಡಿಸಿಕೊಳ್ಳುವವನು ಇವನೋ ಅಥವಾ ತಾನೆಯೋ ಎಂಬ ಶಂಕೆ ಹುಟ್ಟಿ ಆದುಮಿಕೊಂಡ. ಡಿಕ್ಕನು ಇಷ್ಟಕ್ಕೆ ಬಿಡಲಿಲ್ಲ. ಡಾಕ್ಟರನ್ನು ಕುರಿತು "ನಿನ್ನ ಗೆಳೆಯ ನಮ್ಮಿಬ್ಬರ ಮಾತನ್ನು ಯಾರಿಗೂ ಉಸುರುವುದಿಲ್ಲ ತಾನೆ? ಅವನು ನಮ್ಮ ಕಡೆ ತಾನೇ ಎಂದ. ಕೋಪಗೊಂಡಿದ್ದ ಡಾಕ್ಟರ್‌ಗೆ ಈಗ ಹೆದರಿಕೆಯೂ ಆಯಿತು. ಜೇಬಿನಲ್ಲಿ ಪಿಸ್ತೂಲಿಟ್ಟುಕೊಂಡಿದ್ದನೆಂದು ನಂಬುವುದಕ್ಕೆ ನಮಗೆ ಸಾಕಾದಷ್ಟು ಸಂಜ್ಞೆಗಳಿದ್ದವು. ಆದ್ದರಿಂದ ಸಧ್ಯಕ್ಕೆ ಇವನಿಂದ ಉಪಾಯ ಮಾಡಿ ತಪ್ಪಿಸಿಕೊಳ್ಳಬೇಕೇ ವಿನಾ ಎದುರು ಹಾಕಿಕೊಳ್ಳುವುದು ಸಾಧುವಲ್ಲವೆಂಬುದನ್ನು ಒಡನೆಯೇ ಮನಗಂಡೆವು. ಡಿಕ್ಕನ ಮನಸ್ಸಿನಲ್ಲಿ ಏನೋ ಸಂಶಯ ಮೂಡಿತು. ಒಂದು ಸಲ ಇಬ್ಬರನ್ನೂ ದುರುಗುಟ್ಟಿ ನೋಡಿ ಘಾಟರಿಸಿದ. ನನ್ನನ್ನು ಕುರಿತು ಇಲ್ಲಿ ಬಾ ಎಂದ. ನಾನೇಳುವಷ್ಟರಲ್ಲಿಯೇ ಕುಳಿತಿರುವ ದಿಕ್ಕಿನಲ್ಲಿಯೇ ಗೋಡೆಯ ಕಡೆ ಹೋಗು ಎಂದ. ಹೋದೆ, ಗೋಡೆ ಕಡೆ ಮುಖ ತಿರುಗಿಸು, ತಿರುಗಿಸಿದೆ. ಕೂತುಕೊ ಅಲ್ಲಿಯೇ ಕೂತೆ. ಕಣ್ಣಿಗೆ

ಕರ್ಚೀಪು ಕಟ್ಟಿಕೊ, ಜೇಬಿನಿಂದ ತೆಗೆದು ಕಟ್ಟಿಕೊಂಡೆ. ಹಿಂತಿರುಗಿ ನೋಡಬೇಡ. ಕೂಗಿಕೊಳ್ಳಬೇಡ. ಕಪಿವಿದ್ಯೆಗಳನ್ನು ಮಾಡಬೇಡ. ನಿನಗೆ ಯಾವ ವಿಧವಾದ ತೊಂದರೆಯಾಗಲಿ ಅಪಾಯವಾಗಲಿ ಸಂಭವಿಸುವುದಿಲ್ಲ. ಹಾಗೆಯೇ ಕೂತುಕೊಂಡೆ ಇವನ ಆಜ್ಞೆಗಳೆಲ್ಲವನ್ನೂ ಪಾಲಿಸಿದೆ 'ಕಿವಿ ಮುಚ್ಚಿಕೊ' ಎಂದು ಆಜ್ಞೆ ಮಾಡುವುದಕ್ಕೆ ಅವನಿಗೆ ಮೆದುಳಿಲ್ಲದೇ ಹೋಯಿತು. ಆದ್ದರಿಂದ ಇವನಿಗೂ ಡಾಕ್ಟರಿಗೂ ನಡೆದ ಸಂಭಾಷಣೆ ಕೇಳಿಸಿತು.

"ಈ ಸಲ ನೀನಾವ ಉಮೇದುವಾರನಿಗೆ ವೋಟು ಕೊಡುತ್ತಿ ಡಾಕ್ 'ನನಗೆ ಇಷ್ಟ ಬಂದ ಉಮೇದುವಾರನಿಗೆ' ಹಾಗೋ... ನಿನಗೊಬ್ಬ ಮಗಳಿದ್ದಾಳೆಯಲ್ಲವೆ? ಕಳೆದ ನಾಲ್ಕು ವರ್ಷಗಳಿಂದಲೂ ಸ್ಕೂಲು ಉಪಾಧ್ಯಾಯ ವೃತ್ತಿಗಾಗಿ ಕಾಯುತ್ತಿದ್ದಾಳಲ್ಲವೆ? ಹೌದು ನಿನಗೆ ಹೇಗೆ ಗೊತ್ತಾಯಿತು. ಅದು ಬೇರೆ ವಿಷಯ, ನೀನು ನಮ್ಮ ಉಮೇದುವಾರನಿಗೆ ವೋಟು ಕೊಟ್ಟರೆ? (ಪಕ್ಷಕ್ಕೆ) ನಿನ್ನ ಮಗಳಿಗೆ ಕೆಲಸ ದೊರಕಿಸಲು ಪ್ರಯತ್ನಪಡುತ್ತೇವೆ. ನಾವು ಈಗಲೇ ಏನನ್ನೂ ಖಂಡಿತವಾಗಿ ಪ್ರಮಾಣ ಮಾಡುವುದಿಲ್ಲ. ಆದರೆ ಇಷ್ಟು ಮಾತ್ರ ಹೇಳುತ್ತೇನೆ. ನಿನ್ನ ವೋಟನ್ನು ನಮ್ಮ ಪ್ರತಿಸ್ಪರ್ಧಿಗೆ ಕೊಟ್ಟರೆ ನಿನ್ನ ಮಗಳಿಗೆ ಕೆಲಸವೂ ಸಿಕ್ಕುವುದಿಲ್ಲ. ಅವಳು ಸ್ಕೂಲು ಉಪಾಧ್ಯಾಯಳೂ ಆಗುವುದಿಲ್ಲ. ನಿನಗೆ ಅವಳು ದಕ್ಕುವುದೂ ಇಲ್ಲ" (ಪು. ೮೯).

ಮೇಲಿನ ಈ ಸನ್ನಿವೇಶದಲ್ಲಿ ಅಮೆರಿಕದ ರಾಜಕೀಯ ಜಗತ್ತಿನ ಕರಾಳ ಮುಖದ ದರ್ಶನವಿದೆ. ಅಭಿವ್ಯಕ್ತಿ ಸ್ವಾತಂತ್ರ್ಯ ಹೊಂದಿರುವ ಅಮೆರಿಕದಂತಹ ದೇಶದಲ್ಲಿಯೇ ಜನರನ್ನು ಒತ್ತಾಯ ಪೂರ್ವಕವಾಗಿ ಮತವನ್ನು ಕಿತ್ತುಕೊಳ್ಳುವ ಸನ್ನಿವೇಶ ಇರುವುದು ವಿಪರ್ಯಾಸ ಮತ್ತು ಸೋಜಿಗ. ವ್ಯಕ್ತಿ ಸ್ವಾತಂತ್ರ್ಯವೇ ಮೌಲ್ಯವೆಂಬ ನಂಬಿಕೆ ಲೇಖಕರ ಆಲೋಚನೆಯಲ್ಲಿರುವುದು ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ಅವರು ಅಮೆರಿಕದ ರಾಜಕಾರಣವನ್ನು ಅರ್ಥೈಸಲು ಪ್ರಯತ್ನಿಸುತ್ತಾರೆ. ಅಲ್ಲಿನ ರಾಜಕಾರಣಿಗಳು ಓಟು ಪಡೆಯುವ ಈ ವಿಧಾನವು ಅಮೆರಿಕದ ಡೆಮಾಕ್ರಸಿಯ ಇನ್ನೊಂದು ಮುಖವಾಗಿದೆ. ರಾಜಕಾರಣದ ಚರ್ಚೆಯನ್ನೂ ಸಹ ಲೇಖಕರು ತಮಾಶೆಯಾಗಿ ತಮ್ಮ ಜೀವಕ್ಕೆ ಗಂಡಾಂತರ ಒದಗಿದಾಗಲೂ ಹಾಸ್ಯಪ್ರಜ್ಞೆಯಲ್ಲಿ ಮಾಡುತ್ತಾರೆ. ಅಮೆರಿಕದ ರಾಜಕಾರಣಿಗಳನ್ನು ಭಂಡರು ಒರಟರು ನಾಚಿಕೆಗೇಡಿತನದ ಸ್ವಭಾವದವರು ಎಂದು ಟೀಕಿಸುವುದು ಲೇಖಕರ ದಿಟ್ಟ ವ್ಯಕ್ತಿತ್ವವನ್ನು ತಿಳಿಸುತ್ತದೆ. ಅಮೆರಿಕದ ಅಧಿಕಾರಿಯುತ ರಾಜಕಾರಣವನ್ನು ವ್ಯಂಗ್ಯ ವಿಡಂಬನೆಗಳಿಂದ ಟೀಕಿಸಿರುವುದು ಸ್ವಾಮಿಯವರ ತಾತ್ವಿಕವಾದ ದೃಢತೆಯನ್ನು ತಿಳಿಸುತ್ತದೆ.

ಸಾರಾ ಅವರು ಭಾರತದ ರಾಜಕಾರಣದ ಸಾಮಾನ್ಯ ತಿಳುವಳಿಕೆಯ ನೆಲೆಯಲ್ಲಿ ಅಮೆರಿಕದ ರಾಜಕಾರಣವನ್ನು ಗ್ರಹಿಸಿರುವಂತೆ ಕಂಡು ಬರುತ್ತದೆ. ಅಮೆರಿಕದ ಅಧ್ಯಕ್ಷ ಬುಷ್ ಅವರು ಬಹುಮತದ ಕುರಿತು ವಿವಾದವಾಗಿರುವುದನ್ನು ಲೇಖಕಿ 'ಬೋಫೋರ್ಸ್' ನಡೆದಿರಬಹುದೆಂಬ ಸಂದೇಹ ವ್ಯಕ್ತಪಡಿಸುತ್ತಾರೆ. 'ಬೋಫೋರ್ಸ್' ಎಂಬುವುದು ಭಾರತದಲ್ಲಿನ ಶಸ್ತ್ರಾಸ್ತ್ರ ಖರೀದಿಯಲ್ಲಿ ನಡೆದಿರುವ ಒಂದು ಅವ್ಯವಹಾರ.

ದಿವಂಗತ ಮಾಜಿ ಪ್ರಧಾನಿ ರಾಜೀವ್‌ಗಾಂಧಿಯವರು ಆ ಕಂಪನಿಯಿಂದ ಹಣ ಪಡೆದಿರುವ ಆರೋಪಕ್ಕೆ ಒಳಗಾಗಿದ್ದರು. ಅದರಂತೆ ಅಮೆರಿಕದ ರಾಜಕೀಯವು ಶಸ್ತ್ರಾಸ್ತ್ರ ಉತ್ಪಾದಿಸುವ ಕಂಪನಿಗಳ ಕೈಯಲ್ಲಿದೆ. ಹೆಚ್ಚು ಯುದ್ಧದಾಹಿಯಾದ ವ್ಯಕ್ತಿ ಅಮೆರಿಕದ ಅಧ್ಯಕ್ಷನಾಗಲು ಅರ್ಹ ಎಂದು ಶಸ್ತ್ರಾಸ್ತ್ರ ಉತ್ಪಾದಿಸುವ ಕಂಪನಿಗಳು ನಂಬಿವೆ. ಹಾಗಾಗಿ ಬುಷ್‌ರವರ ಬಹುಮತವನ್ನು ಪಡೆದ ರೀತಿ 'ಬೋಫೋರ್ಸ್' ಆಗಿದೆ ಎಂದು ಲೇಖಕಿ ವ್ಯಂಗ್ಯದಿಂದ ಸಂದೇಹವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಇದೇ ಲೇಖಕಿ ಪ್ರವಾಸ ಕಥನದ ಇನ್ನೊಂದು ಕಡೆ 'ಅಮೆರಿಕದ ರಾಜಕಾರಣದಲ್ಲಿ ಹಣದುರುಪಯೋಗವಾಗಲು ಸಾಧ್ಯವಿಲ್ಲ. ಯಾವುದೇ ರೀತಿಯ ಅಪಸ್ವರಕ್ಕೆ ಆಸ್ಪದ ಇಲ್ಲದಂತೆ ಪಾರದರ್ಶಕತೆಯಲ್ಲಿ ಅಲ್ಲಿನ ವ್ಯವಹಾರ ನಡೆಯುತ್ತದೆ' ಎಂದೂ ಹೇಳುತ್ತಾರೆ. ಇದು ಲೇಖಕಿಯ ಸ್ವಯಂ ವಿರೋಧದ ನಿಲುವಾಗಿದೆ. ಇದು ಸಾರಾ ಅವರ ರಾಜಕೀಯ ಪ್ರೌಢಿಮೆಯ ಕೊರತೆಯನ್ನು ತಿಳಿಸುತ್ತದೆ. ಅಮೆರಿಕದ ರಾಜಕೀಯಕ್ಕೂ ಧರ್ಮಕ್ಕೂ ಸಂಬಂಧವೇ ಇಲ್ಲವೆಂದು ಹೇಳುವ ಸಾರಾ ಆ ಮೂಲಕ ಭಾರತದ ರಾಜಕೀಯ ಮತ್ತು ಧಾರ್ಮಿಕತೆಯನ್ನು ಟೀಕಿಸುತ್ತಾರೆ.

"ಅಧ್ಯಕ್ಷೀಯ ಚುನಾವಣೆಯ ಸಂದರ್ಭದಲ್ಲಿ ಒಮ್ಮೆ ಇವರು ತಮ್ಮ ಭಾಷಣದಲ್ಲಿ ಯಹೂದ್ಯ ಧರ್ಮದ ವಿಷಯವನ್ನೇನೋ ಹೇಳಿದರು. ಮರುದಿನವೇ ಪತ್ರಿಕೆಗಳು ಇವರನ್ನು ತರಾಟೆಗೆ ತೆಗೆದುಕೊಂಡವು. ರಾಜಕೀಯದಲ್ಲಿ ಧರ್ಮವನ್ನು ಬೆರೆಸಬಾರದು ಎಂದು ಪತ್ರಿಕೆಗಳ ಪತ್ರಗಳ ಭಾಗದಲ್ಲಿ ಸಾಕಷ್ಟು ಪತ್ರಗಳು ಪ್ರಕಟವಾದವು. ರಾಜಕಾರಣಿಗಳು ಚರ್ಚು ಮತ್ತು ದೇವಾಲಯಗಳಿಗೆ ಹೋಗಿ ಧರ್ಮ ಗುರುಗಳ ಕಾಲಿಗೆ ಬೀಳುವುದೂ ಇಲ್ಲ. ಪತ್ರಿಕೆಗಳ ಮೂಲಕ ತಮ್ಮ ಈ ನಡೆವಳಿಕೆಗೆ ಪ್ರಚಾರ ಪಡೆಯುವುದೂ ಇಲ್ಲ. ನಮ್ಮ ದೇಶದಂತೆ ಧರ್ಮದ ವಿಷಯವನ್ನೆತ್ತಿ ಗೊಂದಲವೆಬ್ಬಿಸಿ ಜನರ ಮನದಲ್ಲಿ ಕೋಮುವಾದದ ವಿಷಬೀಜ ಬಿತ್ತುತ್ತಾ ಚುನಾವಣೆ ಗೆದ್ದು ಅಧಿಕಾರಕ್ಕೆ ಬರುವುದು ಅಲ್ಲಿ ಸಾಧ್ಯವಿಲ್ಲ" (ಪು. ೧೫೫).

ಲೇಖಕಿ ಅಮೆರಿಕದ ರಾಜಕಾರಣಿಗಳು ಧಾರ್ಮಿಕ ಮುಖಂಡರಿಗೆ ಅವರ ಕಾಲುಗಳಿಗೆ ಬೀಳುವುದಿಲ್ಲ ಎಂದು ಹೇಳಿರುವುದು ಭಾರತೀಯ ರಾಜಕಾರಣಿಗಳನ್ನು ಪರೋಕ್ಷವಾಗಿ ವ್ಯಂಗ್ಯದಿಂದ ಟೀಕಿಸಿದಂತಿದೆ. ನಮ್ಮಂತೆ ಅಮೆರಿಕನ್ನರು ದೈವಭಕ್ತಿ ಹೊಂದಿಲ್ಲವೆಂಬುದನ್ನು ಇದು ತಿಳಿಸುತ್ತದೆ. ಇದಕ್ಕೆ ಸೂಚಕವೆಂಬಂತೆ, ಅಲ್ಲಿನ ಜನರಿಗೆ ಆಧ್ಯಾತ್ಮಿಕತೆಯಲ್ಲಿ ಆಸಕ್ತಿ ಕಡಿಮೆಯಾಗುತ್ತಿದೆ. ಚರ್ಚು ಪಾದ್ರಿಗಳ ಮೇಲೆ ವಿಶ್ವಾಸ ಕಳೆದುಕೊಳ್ಳುತ್ತಿದ್ದಾರೆ ಎಂದು ಪ್ರಭುಶಂಕರ್ ಅವರು ತಮ್ಮ ಪ್ರವಾಸ ಕಥನದಲ್ಲಿ ಹೇಳುತ್ತಾರೆ.[೩] ಜಾತ್ಯಾತೀತ ಮನೋಭಾವದವರಾದ ಸಾರಾ ಅಮೆರಿಕದ ರಾಜಕಾರಣದಲ್ಲಿ ಜಾತಿವೈಷಮ್ಯ ಇರದಿರುವುದನ್ನು ಮೆಚ್ಚುತ್ತಾರೆ. ಜಾತಿವೈಷಮ್ಯದ ವಿಷಬೀಜ ಬೀತ್ತಿ ಚುನಾವಣೆ ಗೆಲ್ಲಲು ಅಮೆರಿಕದಲ್ಲಿ ಸಾಧ್ಯವಿಲ್ಲ ಎಂದು ಹೇಳುತ್ತಾರೆ. ಹಾಗೆ ಹೇಳುವಾಗ ಲೇಖಕಿ ಭಾರತದ ರಾಜಕಾರಣವನ್ನು ದೃಷ್ಟಿಯಲ್ಲಿಟ್ಟುಕೊಂಡಂತಿದೆ. ಅದರಲ್ಲೂ ಲೇಖಕಿ ಕರ್ನಾಟಕದ ಕರಾವಳಿ ಭಾಗದ ರಾಜಕೀಯ ವಿದ್ಯಮಾನದ ಗ್ರಹಿಕೆಯ ಹಿನ್ನೆಲೆಯಲ್ಲಿ ಕೋಮುವಾದದ ಚರ್ಚೆ ಮಾಡಿದ್ದಾರೆ. ಆದರೆ ಕೋಮುವಾದವು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತವಾಗಿರದೇ ಇಡೀ ದೇಶದ ರಾಜಕಾರಣವನ್ನು ಒಳಗೊಳ್ಳುತ್ತಿದೆ ಎಂಬುದನ್ನು ಸಹ ಲೇಖಕಿ ತಿಳಿಸುತ್ತಾರೆ. ಅಮೆರಿಕದ ರಾಜಕಾರಣದಲ್ಲಿ

ಡೆಮಾಕ್ರಟಿಕ್ ಪಕ್ಷ ಕರಿಯರ (ನೀಗ್ರೋ) ಅಭಿವೃದ್ಧಿಗಾಗಿ ನಿಧಿ ಇಟ್ಟಿರುವುದು, ಅಮೆರಿಕದ ಮೂಲನಿವಾಸಿಗಳಿಗೆ, ಕರಿಯರಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿರುವುದನ್ನು ಲೇಖಕಿ ಸ್ಮರಿಸುತ್ತಾರೆ. ಹಾಗೆ ಸ್ಮರಿಸುವುದು ಲೇಖಕಿಯ ದಲಿತಪರ - ಶೋಷಿತರ ಪರವಾದ ಕಾಳಜಿಯನ್ನು ತಿಳಿಸುತ್ತದೆ.

ರಾಜಕೀಯ ಚರ್ಚೆ ಮಾಡುವಾಗ ಲೇಖಕರ ರಾಜಕೀಯ ಪ್ರಜ್ಞೆ ಅಷ್ಟಾಗಿ ಪ್ರಬುದ್ಧತೆಯಿಂದ ಕೂಡಿಲ್ಲವೆಂಬಂತೆ ಕಂಡು ಬರುತ್ತದೆ. ರಾಜಕೀಯಕ್ಕೂ ನನಗೂ ಸಂಬಂಧವಿಲ್ಲ ಎಂದು ಬಿ.ಜಿ.ಎಲ್. ಸ್ವಾಮಿಯವರು ಹೇಳಿದರೂ ಅವರು ಮಾಡುವ ರಾಜಕೀಯ ವ್ಯಾಖ್ಯಾನ ಪ್ರಬುದ್ಧವಾಗಿದೆ. ರಾಜಕೀಯ ಪ್ರಜ್ಞೆಯಿಂದ ಕೂಡಿದೆ.

**ಟಿಪ್ಪಣಿಗಳು**

೧. **ಕೆ. ಗಿರೀಶ್, ಅಮೆರಿಕ ಅಂತರಂಗ, ಪು. ೬೯-೭೦**

೨. **ಕೆ. ಗಿರೀಶ್, ಅಮೆರಿಕ - ಅಂತರಂಗ, ಪು. ೮೫**

೩. **ಪ್ರಭುಶಂಕರ, ಅಮೆರಿಕದಲ್ಲಿ ನಾನು, ಶಾಂತಿ, ಪು. ೮೧**

* * *

ಅಧ್ಯಾಯ ೪

# ಪ್ರವಾಸ ಕಥನಗಳ ಅಭಿವ್ಯಕ್ತಿ ವಿಧಾನ : ತೌಲನಿಕ ಚರ್ಚೆ

## ೪.೧. ಭಾಷೆ ಮತ್ತು ಶೈಲಿ

ಪ್ರವಾಸ ಕಥನಗಳಲ್ಲಿ ಬಳಕೆಯಾಗುವ ಭಾಷೆ ಮತ್ತು ಶೈಲಿಗಳು ಅವುಗಳ ಅಧ್ಯಯನದಲ್ಲಿ ಮಹತ್ವದ ಸಂಗತಿಗಳು. ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳಲ್ಲಿ ಮುಖ್ಯವಾಗಿ ಬಳಕೆಯಾಗಿರುವ ನಿರೂಪಣೆಗೂ, ಅವುಗಳ ಹಿಂದಿನ ದೃಷ್ಟಿಕೋನಕ್ಕೂ ಒಂದು ಸಂಬಂಧವಿದೆ. ಅದನ್ನು ಗುರುತಿಸಿ ಚರ್ಚಿಸುವುದನ್ನು ಈ ಅಧ್ಯಯನದಲ್ಲಿ ಯತ್ನಿಸಲಾಗುವುದು. ಸಾಮಾನ್ಯವಾಗಿ ಪ್ರವಾಸ ಕಥನಗಳು ಗದ್ಯನಿರೂಪಣೆಯ ಕಥನ ಶೈಲಿಯನ್ನು ಒಳಗೊಂಡಿರುತ್ತವೆ. ಅಮೆರಿಕ ಕುರಿತ ಈ ಪ್ರವಾಸ ಕಥನಗಳು ಇದಕ್ಕೆ ಹೊರತಾಗಿಲ್ಲ.

ಪ್ರವಾಸಕ್ಕೆ ಹೋದವರೆಲ್ಲ ಪ್ರವಾಸ ಕಥನಗಳನ್ನು ಬರೆಯಲು ಆಗುವುದಿಲ್ಲ. ಪ್ರವಾಸ ಕಥನವೆಂಬುದು ವ್ಯಕ್ತಿನಿಷ್ಠ ಸಾಹಿತ್ಯವಾಗಿದೆ. ಎಲ್ಲ ಸಾಹಿತ್ಯಗಳಿಗೆ ಅನುಭವ ಎಷ್ಟು ಮುಖ್ಯವೊ ಪ್ರವಾಸ ಕಥನಕ್ಕೂ ಅಷ್ಟೇ ಮುಖ್ಯ. ಪ್ರವಾಸಿಯ ಗ್ರಹಿಕೆಯ ಶಕ್ತಿಯನ್ನು ಅವಲಂಬಿಸಿ ಅವನ ಅನುಭವ ಗಟ್ಟಿ ಇಲ್ಲವೆ ಟೊಳ್ಳಾಗಿರುತ್ತದೆ. ಗ್ರಹಿಕೆ ಶಕ್ತಿ, ಗುಣವಿಲ್ಲದ ಪ್ರವಾಸಿಯ ರೆಕ್ಕೆಗಳಿಲ್ಲದ ಪಕ್ಷಿಯಂತೆ ಎಂದು ವಿದ್ಯಾಶಂಕರ್ ಅವರು ಹೇಳುತ್ತಾರೆ.[೧] ಎಷ್ಟರಮಟ್ಟಿಗೆ ಅವನ ಕಣ್ಣು ಮನಗಳು ಭೂಮಿ ವ್ಯೋಮ ವಿಹಾರಿಯಾಗುತ್ತದೊ ಅಷ್ಟರಮಟ್ಟಿಗೆ ಅವನ ಅಂತರಂಗ ಕಲಿಯುತ್ತದೆ, ನಲಿಯುತ್ತದೆ. ಅವನ ಸಂವೇದನಾಶೀಲತೆಯನ್ನಾಧರಿಸಿ ಅನುಭವ ದ್ರವ್ಯ ಸಲ್ಲುತ್ತದೆ. ಸಮೃದ್ಧ ಅನುಭವ ರಾಶಿಯನ್ನು ಕಟ್ಟಲು ಭಾಷೆ ಪ್ರಧಾನವಾಗುತ್ತದೆ. ಅವನ್ನು ನಿರೂಪಿಸುವಾಗ ನಿರೂಪಣಾಶೈಲಿ ಗಮನಾರ್ಹವಾಗುತ್ತದೆ. ತಾನು ಕಂಡುಂಡ ಸಂಗತಿಗಳನ್ನು ವ್ಯವಸ್ಥಿತವಾಗಿ ಜೋಡಿಸಲು ಬಹಳ ಹೆಣಗಾಡಬೇಕಾಗುತ್ತದೆ. ಅಲ್ಲಿ ಸಫಲತೆಗಿಂತ ವೈಫಲ್ಯವೇ ಹೆಚ್ಚಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಬರಹಕ್ಕಿಳಿಸುವಾಗ ಸಮಸ್ಯೆ ಭಾಷೆಯದು. ಕನ್ನಡದ ಸಂವೇದನಾಶೀಲ ಲೇಖಕರು ಹೇಗೆ ತಮ್ಮ ಪದಸಂಪತ್ತಿನ ಮೂಲಕ ಪ್ರವಾಸ ಕಥನಗಳಿಗೆ ಯಾವ ಆಯಾಮ ನೀಡುತ್ತಾರೆ ಎಂಬುದನ್ನು ಗುರುತಿಸಬೇಕಾಗಿದೆ. ಅಮೆರಿಕ ಕುರಿತ ಪ್ರವಾಸ ಕಥನ ಬರೆದಿರುವ ಮೂವರೂ ಲೇಖಕರು ಕನ್ನಡದಲ್ಲಿ ಪಳಗಿದ ಹೆಸರಾಂತ ಲೇಖಕರು. ತಮ್ಮ ಕಥನಗಳಲ್ಲಿ ಭಾಷೆ ಶೈಲಿಗಳನ್ನು ಹೇಗೆ ಬಳಸುತ್ತಾರೆ ಎಂಬುದನ್ನು ಇಲ್ಲಿ ನೋಡಬಹುದಾಗಿದೆ.

ಶ್ರೀ ಮೂರ್ತಿರಾವ್ ಅವರು ತಮ್ಮ ಪ್ರವಾಸ ಕಥನದುದ್ದಕ್ಕೂ ನವಿರಾದ ಹಾಸ್ಯಭರಿತ ಉದಾರವಾದಿ, ಸಹನೆ ಮುಂತಾದ ಮೌಲ್ಯಗಳಿಂದ ಕೂಡಿದ ಶೈಲಿಯನ್ನು ಬಳಸಿರುವುದು ಕಂಡು ಬರುತ್ತದೆ. ಇವು ಲೇಖಕರ

ಕಟುತ್ವವಿಲ್ಲದ ಮನೋಭಾವನೆಯನ್ನೂ ಚಿಂತನಶೀಲ ಗುಣವನ್ನು ತಿಳಿಸುತ್ತದೆ. ಪ್ರವಾಸ ಕಥನದುದ್ದಕ್ಕೂ ಅವರು ಯಾವುದೇ ಸಂದರ್ಭದಲ್ಲಿ ಬಲವಾದ ವಿರೋಧ ಅಸಮ್ಮತಿ ಸೂಚಿಸುವುದಿಲ್ಲ. ಈ ಉದಾರವಾದಿ ನಿಲುವಿಗೆ ಲೇಖಕರ ವಯಸ್ಸು ಒಂದು ಕಾರಣ ಎನ್ನಬಹುದು. ಮೂರ್ತಿರಾವ್ ಅವರ ತಿಳಿಯಾದ ಹಾಸ್ಯ ಪ್ರಜ್ಞೆಯು ಅವರ ಜೀವನ ಪ್ರೀತಿಯ ಸಂಕೇತವಾಗಿದೆ. 'ಪರ ದೇಶದ ಪ್ರಯಾಣವೆಂದರೆ ಒಂದು ಟ್ರಂಕು ಒಂದು ಚೀಲ ಕೈಯಲ್ಲಿ ಹಿಡಿದು ಜಯ ಪರಮೇಶ್ವರಿ ಮಂತ್ರ ಜಪಿಸಿ ಹಾರಿ ಹೋಗುವಂತಿಲ್ಲ'. ಹೀಗೆ ಅನೇಕ ಸಂದರ್ಭಗಳಲ್ಲಿ ಹಾಸ್ಯಭರಿತವಾದ ಧಾಟಿಯಿಂದ ಅವರು ಕಥನವನ್ನು ಲವಲವಿಕೆಗೊಳಿಸುತ್ತಾರೆ. ಎಲ್ಲ ಸಾಮಗ್ರಿಗಳನ್ನು ಒಂದು ಟ್ರಂಕಿನಲ್ಲಿ ತುಂಬಿಕೊಂಡು ತೀರ್ಥಯಾತ್ರೆಗಳಿಗೆ ಹೋಗುವ ನೆನಪು ಇಲ್ಲಿ ಬರುತ್ತದೆ. ಆದರೆ ಮುಪ್ಪಿನಲ್ಲಿ ಲೇಖಕರು ಹೋಗುತ್ತಿರುವುದು ತೀರ್ಥಯಾತ್ರೆಗಲ್ಲ. ಅಮೆರಿಕೆಗೆ ಅಲ್ಲಿನ ಪ್ರವಾಸಕ್ಕೆ ಹೋಗುವ ಮುಂಚೆ ವೀಸಾ ಮೊದಲಾದ ಕಾಗದ ಪತ್ರಗಳನ್ನು ಮಾಡಿಸಿಕೊಳ್ಳಬೇಕಾಗುತ್ತದೆ ಎಂಬುದನ್ನು ಲೇಖಕರು ಈ ಹಾಸ್ಯದಲ್ಲಿ ವ್ಯಂಗ್ಯವಾಗಿ ಸೂಚಿಸುತ್ತಿದ್ದಾರೆ. ತಾವು ಹೋಗುತ್ತಿರುವುದು ತೀರ್ಥಯಾತ್ರೆಗಲ್ಲ ಎಂದು ಹೇಳುವ ವೈಚಾರಿಕತೆ ಕೂಡ ಇಲ್ಲಿ ಕೆಲಸ ಮಾಡಿದೆ.

ಮೂರ್ತಿರಾವ್ ಅವರು ಪ್ರವಾಸ ಕಥನದಲ್ಲಿ ಅನೇಕ ಪದಗಳನ್ನು ಭಾಷಾಂತರಿಸಿದ್ದಾರೆ. ಅವಕ್ಕೆ ಹೊಸ ರೂಪಾಂತರ ಮಾಡುತ್ತಾರೆ. ಇದು ಅಮೆರಿಕದ ಪಾಶ್ಚಿಮಾತ್ಯ ಸಂಸ್ಕೃತಿಯ ಚಿತ್ರ ಕೊಡುವಲ್ಲಿ ತುಂಬ ಸಹಾಯಕವಾಗಿದೆ.

ಹೇಳಿಕೆ - Hearsay (ಪು. ೧೭);

ಸೂರ್ಯನಿರೋಧಿ - Sun breakers (ಪು. ೨೦);

ಅಸಭ್ಯ ಪ್ರದರ್ಶನ - Indecent Exposure (ಪು. ೨೧);

ರಕ್ಷಿತನಗರ ವನ - Urban Forests (ಪು. ೨೫);

ಜಯೋಪಾಖ್ಯಾನ - Success Stgories (ಪು. ೨೮);

ಸೂರ್ಯಸ್ನಾನ - Sun bathing (ಪು. ೮೭);

ವೀರಾಭಿಮಾನ - Fanaticism (ಪು. ೧೦೩);

ಮರಳುಗಲ್ಲು - Sand Stone (ಪು. ೧೪೭);

ಸುವರ್ಣಯುಗ - Goldenage (ಪು. ೧೫೫); ಇತ್ಯಾದಿ.

ಈ ಭಾಷಾಂತರಿಸಿದ ಅಥವಾ ರೂಪಾಂತರಿಸಿದ ಪದಗಳು ಕೃತಿಯುದ್ದಕ್ಕೂ ಬಳಕೆಯಾಗಿವೆ. ಮೂರ್ತಿರಾವ್ ಅವರು ಇಂಗ್ಲೀಷ್ ಪ್ರಾಧ್ಯಾಪಕರೂ ಭಾಷಾಂತರಕಾರರೂ ಆಗಿರುವುದರಿಂದ ಈ ಪ್ರಯೋಗ ಸಾಧ್ಯವಾಗಿದೆ.

ಸ್ವನಂಬಿಕೆ, ಸಹನೆ, ಸಮಾನತೆಯ ಅನೇಕ ಗುಣಗಳು ಮೂರ್ತಿರಾವ್ ಅವರಲ್ಲಿ ಕಂಡು ಬರುತ್ತವೆ. ಮಗ ರಾಜು ಮತ್ತು ನ್ಯಾನ್ಸಿಯರ ಮದುವೆ ವಿಚಾರದಲ್ಲಿ ಮಗನಿಗೆ ಸಹನೆಯಿಂದ ಅಂತರ್‌ಜಾತಿ ವಿವಾಹದ ಒಳಿತು-ಕೆಡಕುಗಳನ್ನು ವಿವರಿಸಿ ಹೇಳುತ್ತಾರೆ. ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ಬರದ ಹಾಗೆ ಮದುವೆಯ ವಿಚಾರಕ್ಕೆ ಅಂತಿಮ ನಿರ್ಧಾರ ನಿನ್ನದೇ ಎಂಬುದನ್ನು ಮಗ ರಾಜುಗೆ ಮೂರ್ತಿರಾವ್‌ರು ವಹಿಸುತ್ತಾರೆ. ಇದು ಅವರ ಉದಾರವಾದಿ ಮನೋಭಾವದ ಜೊತೆಗೆ ಸಹನೆಯ ಗುಣವನ್ನು ತಿಳಿಸುತ್ತದೆ.

"ಔದಾರ್ಯವಾಗಲಿ ಸಣ್ಣತನವಾಗಲಿ ಯಾವುದೊಂದು ಜನಾಂಗದ, ದೇಶದ ಅಥವಾ ಸಂಸ್ಕೃತಿಯ ಸ್ವತ್ತಲ್ಲ" (ಪು. ೪೭). "ಆಸ್ಪತ್ರೆಗೆ ಹೋದ ಮೇಲೆ ಡಾಕ್ಟರ್ ಕಾಲ ಅವನ ಸ್ವತ್ತಲ್ಲ" (ಪು. ೩೨೭) ಮುಂತಾದ ಸಮಚಿತ್ತದ ಮೌಲ್ಯಯುತ ಹೇಳಿಕೆಗಳೂ ಕೂಡ ಈ ಗುಣದ ಭಾಗವಾಗಿವೆ. ಮೂರ್ತಿರಾವ್‌ರ ಕೃತಿಯಲ್ಲಿ ಒಂದು ಬಗೆಯ ಮೌಲ್ಯ ಪ್ರಜ್ಞೆಯಿದೆ. ಮಾಗಿದ ಜೀವನಾನುಭವದಿಂದ ಇಂತಹ ಮಾತುಗಳು ಹುಟ್ಟುತ್ತವೆ. ಒಟ್ಟಾರೆಯಾಗಿ ಹಾಸ್ಯ, ವ್ಯಂಗ್ಯ, ಸಮಾನತೆ, ಸಹೃದಯತೆ, ಉದಾರ ಮನೋಭಾವನೆ, ಸ್ವಸಂಸ್ಕೃತಿ ಬಗೆಗೆ ಅಭಿಮಾನ, ವಿದೇಶಿ ಸಂಸ್ಕೃತಿ ಬಗೆಗೆ ಸಹನೆ ಇವೆಲ್ಲವೂ ಮೂರ್ತಿರಾವ್‌ರವರ ಕೃತಿಯಲ್ಲಿ ಬರುತ್ತದೆ.

ಬಿ.ಜಿ.ಎಲ್. ಸ್ವಾಮಿಯವರ ಪ್ರವಾಸ ಕಥನದಲ್ಲಿ, ನೇರನುಡಿ, ವ್ಯಂಗ್ಯ ಹಾಸ್ಯ ವಿಡಂಬನೆಗಳಿಂದ ಕೂಡಿದ ಶೈಲಿಯಿದೆ. ಸಾಮಾಜಿಕ ಧಾರ್ಮಿಕವಾದ ಅನೇಕ ಸಂಗತಿಗಳನ್ನು ನೇರವಾಗಿ ಲೇಖಕರು ವಿಡಂಬಿಸಿ ಟೀಕಿಸುತ್ತಾರೆ. ಟೀಕೆಯಲ್ಲಿ ಅವರ ಸ್ವಂತ ವರ್ತನೆ, ಆಲೋಚನೆಗಳೂ ಸೇರುತ್ತವೆ. ಇದು ಅವರ ಆತ್ಮವಿಮರ್ಶೆಯ ಗುಣದ ಭಾಗವಾಗಿದೆ.

'ನಿಮ್ಮ ಪ್ರಯಾಣಕ್ಕೆ ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡು ಒಂದು ಕಾಲಿನ ಮೇಲೆ ನಿಂತಿರಿ! ನಾಳೆ ಹೊರಡೆಂದು ಹೇಳಿದರೂ ಹೊರಡುವುದಕ್ಕೆ ಸಿದ್ಧರಾಗಿರಿ!! ನಾವು ನಿರ್ದೇಶಿಸಿದ ವಾಹನದಲ್ಲಿ ನೀವು ಯಾನ ಮಾಡುವುದಕ್ಕೆ ಸಿದ್ಧರಿಲ್ಲವಾದರೆ ನಿಮಗೆ ಕೊಟ್ಟಿರುವ ಪರದೇಶ ವೇತನ ದಕ್ಕದೇ ಹೋದಿತು?!! ಜೋಕೆ ಎಂಬ ಧೋರಣೆಯಲ್ಲಿ ಎಚ್ಚರಿಕೆ ಕೊಟ್ಟಿದ್ದರು' (ಪು. ೧).

ಈ ಭಾಗದಲ್ಲಿ ಲೇಖಕರು ಪ್ರಯಾಣಕ್ಕೆ ಸಿದ್ಧತೆಗೊಳ್ಳುವ ಸಂದರ್ಭದಲ್ಲಿ ಸರ್ಕಾರ ವಿಧಿಸಿದ ನಿಯಮಗಳಿಗೆ ತಾನು ಪಾಲಿಸುವ ವಿಧೇಯತೆ ತೋರಿದೆ ಎಂಬ ನಿಲುವಿದೆ. ಸಾಮಾನ್ಯವಾಗಿ ಆತ್ಮಚರಿತ್ರೆಯ ಲೇಖಕರು ತಮ್ಮ ನಿಜಜೀವನದಲ್ಲಿ ಕೇವಲ ಒಳ್ಳೆಯ ಸಂಗತಿಗಳನ್ನು ದಾಖಲಿಸಿ ತಮ್ಮನ್ನು ದೊಡ್ಡವರಾಗಿ ಚಿತ್ರಿಸಿಕೊಳ್ಳುವುದಕ್ಕೆ ಪ್ರಯತ್ನಿಸುವುದುಂಟು. ಆದರೆ ಸ್ವಾಮಿಯವರು ತಮ್ಮ ಜೀವನದ ಹಿನ್ನೆಡೆಯ ಸನ್ನಿವೇಶಗಳನ್ನೂ ಅವಮಾನಿತ ಸಂಗತಿಗಳನ್ನೂ ಸಹ ಮುಜುಗರವಿಲ್ಲದೆ ದಾಖಲಿಸುತ್ತಾರೆ. ಇದು ಅವರ ಆತ್ಮವಿಮರ್ಶಾ ಗುಣವನ್ನು ತಿಳಿಸುತ್ತದೆ.

"ಆಗ ನಾಲ್ವರು ಪ್ರಯಾಣಿಕರಿಗೊಂದು ಕಕ್ಕಸು. ಈಗ ಮೂವತ್ತು ಮಂದಿಗೊಂದು. ಆಗಿನ ಒಂದೊಂದು ಕಕ್ಕಸೂ ಪ್ರತ್ಯೇಕವಾದ ಒಂದು ಕೋಣೆಯೊಳಗಿದ್ದು ಶೌಚಕ್ಕೆಂದು ಹೋದವನು ಬಾಗಿಲು

ಹಾಕಿಕೊಂಡು ಏಕಾಂತವಾಗಿ ತನ್ನ ಕೆಲಸ ಮುಗಿಸಿಕೊಂಡು ಬರಬಹುದಾಗಿತ್ತು! ಈಗಿನವು ಹಾಗಲ್ಲ; ಸುಮಾರು ಮುನ್ನೂರು ಜನರ ಉಪಯೋಗಕ್ಕಿರುವ ಕಕ್ಕಸುಗಳೆಲ್ಲ ಒಂದೇ ಆವರಣದಲ್ಲಿ ಒಂದು ಚೌಕಟ್ಟಿನಂತೆ (ಪು. ೪).

ಶಿಷ್ಟ ಮನಸ್ಸಿನ ಸ್ವಾಮಿಯವರು ಮುಜುಗರ ಪಡುವ ಸಂಗತಿಗಳನ್ನು ಸಹಜವಾಗಿ, ನೇರವಾಗಿ ಹೇಳಿರುವುದು ಅವರ ದಿಟ್ಟ ಮನೋಭಾವವನ್ನು ತಿಳಿಸುತ್ತದೆ. ಏಕಾಂತದಲ್ಲಿ ನಡೆಯುವ ಶೌಚಕ್ರಿಯೆಯನ್ನು ಸಾರ್ವತ್ರಿಕಗೊಳಿಸುವ ಬಗೆಯನ್ನು ಹಾಸ್ಯಾಸ್ಪದಗೊಳಿಸುವ ವಿಧಾನವು ಅಲ್ಲಿನ ವ್ಯವಸ್ಥೆಯನ್ನು ಟೀಕಿಸುತ್ತಲೇ ಸಹ್ಯಗೊಳಿಸುತ್ತದೆ. 'ನನ್ನ ಟೋಪಿ', 'ಸೀರೆಯ ಕತೆ', 'ನನ್ನ ಸೆಕ್ರಟರಿ ಕಾರು ಕೋರ್ಟು' ಮುಂತಾದ ಅಧ್ಯಾಯಗಳಲ್ಲಿ ಕೂಡ ಹಾಸ್ಯಭರಿತ ಸನ್ನಿವೇಶಗಳನ್ನು ತರುವುದರ ಮೂಲಕ ಭಾರತೀಯ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳಲ್ಲಿನ ಅನೇಕ ಅಂಶಗಳನ್ನು ಲೇಖಕರು ವಿಮರ್ಶೆಗೆ ಒಳಪಡಿಸುತ್ತಾರೆ. ಮುಖ್ಯವಾಗಿ ಹಳೆಯ ನಂಬಿಕೆಗಳಿಗೆ ತಿಲಾಂಜಲಿ ನೀಡಿ ಹೊಸದರ ಕಡೆಗೆ ಸಾಗುವಿಕೆಗೆ ಹೆಚ್ಚಿನ ಒಲವನ್ನು ನೀಡಿರುವಂತೆ ಸ್ವಾಮಿಯವರ ದೃಷ್ಟಿಕೋನ ಕಂಡು ಬರುತ್ತದೆ.

ಸಾರಾ ಅವರಲ್ಲಿ ವರ್ತಮಾನ ವಾಸ್ತವಿಕ ಚಿತ್ರಣ ಕೊಡುವ ಉದ್ದೇಶವಿರುವ ಕಾರಣ ನಿರ್ಲಿಪ್ತವಾದ ನಿರೂಪಣಾ ಶೈಲಿ ಬಳಸುತ್ತಾರೆ. ತಮಗೆ ಅಮೆರಿಕದ ಬಗೆಗೆ ತಿಳಿದದ್ದು ಆ ದೇಶದ ಚಾರಿತ್ರಿಕ ಪುಸ್ತಕಗಳಿಂದ ಎಂದು ಸಾರಾ ಅವರೇ ಒಪ್ಪಿಕೊಳ್ಳುತ್ತಾರೆ. ಹಾಗಾಗಿ ಅಮೆರಿಕದ ಇತಿಹಾಸ ಭೌಗೋಳಿಕ ಪ್ರದೇಶಗಳನ್ನು ತಮ್ಮ ಕಥನದಲ್ಲಿ ಪರಿಚಯ ಮಾಡುವ ಪ್ರಯತ್ನ ಮಾಡುತ್ತಾರೆ. ಈ ಉದ್ದೇಶವು ಚಾರಿತ್ರಿಕವಾಗಿ ನಿರ್ಲಿಪ್ತ ಎನಿಸುವ ಒಂದು ನಿರೂಪಣಾ ವಿಧಾನಕ್ಕೆ ಕಾರಣವಾಗಿದೆ. ಲೇಖಕಿ ಸರಳವಾದ ಗದ್ಯದಲ್ಲಿ ಗಂಭೀರ ವಿಚಾರಗಳನ್ನು ಪ್ರಕಟಿಸಲು ಯತ್ನಿಸುತ್ತಾರೆ. ಕ್ಲಿಷ್ಟಪದಗಳ ಬಳಕೆ ಅವರ ಪ್ರವಾಸ ಕಥನದಲ್ಲಿ ಎಲ್ಲೂ ಕಂಡು ಬರುವುದಿಲ್ಲ. ಯಾವುದೇ ಸಂದರ್ಭಗಳಿಗೂ ನಿರ್ದಿಷ್ಟವಾದ ಕಾಲಸೂಚಕ ಇಸವಿ ಕೊಡುತ್ತಾರೆ. ಅವರ ಪ್ರವಾಸ ಕಥನವನ್ನು ಮೂರು ಭಾಗಗಳಲ್ಲಿ ವಿಂಗಡಿಸಬಹುದು. ಮೊದಲನೆಯದಾಗಿ ಅಮೆರಿಕದ ಇತಿಹಾಸ. ಎರಡನೆಯದಾಗಿ ಅಲ್ಲಿನ ಭೌಗೋಳಿಕ ಪರಿಸರದ ಪರಿಚಯ ಮತ್ತು ನಿಸರ್ಗ ಸಂಪತ್ತು. ಮೂರನೆಯ ಭಾಗದಲ್ಲಿ ಲೇಖಕಿಯ ಅನುಭವಗಳು.

ಸಾರಾ ತಮ್ಮ ಪ್ರವಾಸ ಕಥನದಲ್ಲಿ ಕೆಲವೊಮ್ಮೆ ಕೆಲವು ಬೀಸು ಹೇಳಿಕೆಗಳನ್ನು ನೀಡುತ್ತಾರೆ. ಒಮ್ಮೆ ಹೇಳಿದ ಹೇಳಿಕೆಗಳಿಗೆ ತಾತ್ವಿಕವಾಗಿ ವಿರುದ್ಧವಾಗಿರುವ ಹೇಳಿಕೆಗಳೂ ಸಹ ಕಂಡು ಬರುತ್ತವೆ. 'ಎಲ್ಲೂ ಕಸಕಡ್ಡಿಗಳು ಬಿಡಿ, ಒಂದು ಕಾಗದ ಚೂರಾದರೂ ಎಲ್ಲೂ ಕಾಣುವುದಿಲ್ಲ. ಇದು ಇಡೀ ಅಮೆರಿಕದ ದೃಶ್ಯ. ಸ್ವರ್ಗಕ್ಕೆ ಮೂರು ಗೇಣಲ್ಲ; ಸ್ವರ್ಗ. ಯಾವುದೇ ರೀತಿಯ ತಾರತಮ್ಯಕ್ಕೂ ಇಲ್ಲಿ ಅವಕಾಶವಿಲ್ಲ' (ಪು. ೯೫). ಹೀಗೆ ಹೇಳುವ ಸಾರಾ ಅವರೇ ಪ್ರವಾಸ ಕಥನದ ಇನ್ನೊಂದು ಭಾಗದಲ್ಲಿ 'ಅಮೆರಿಕನ್ನರ ಈ ಸುಖ ಸಂತೋಷಗಳು, ಐಷಾರಾಮ ಬದುಕು ಮೇಲ್ಭಾಗದ ಹರವು. ಒಳಭಾಗದಲ್ಲಿ ಇಣುಕಿ ನೋಡಿದರೆ ಅಸಂತೋಷದ, ದುಃಖದ ಅಸಹನೆಯಿಂದ ಕುದಿಯುವ ಮನಸ್ಸುಗಳು ಹಾಗೂ

ಭಾರವಾದ ಹೃದಯಗಳ ನಿಟ್ಟುಸಿರು ನಮಗೆ ಅನುಭವವಾಗಬಹುದು. ಮುರಿದ ಮನಸ್ಸುಗಳಿಂದಾಗಿ ಒಡೆದ ಕುಟುಂಬಗಳು ಸಾಕಷ್ಟಿವೆ' (ಪು. ೧೩೩) ಎಂದೂ ಹೇಳುತ್ತಾರೆ. ಬಂಡಾಯ ಲೇಖಕಿಯಾಗಿ ಸಾರಾ ಪ್ರವಾಸ ಕಥನದಲ್ಲಿ ಅಮೆರಿಕ ಬಗ್ಗೆ ಸಹಮತವನ್ನು ತಾಳಿರುವುದು ಕಂಡು ಬರುತ್ತದೆ. ಅವರು ತಮ್ಮ ಬಂಡಾಯ ಮನೋಭಾವವನ್ನು ಕೆಲವು ಕಡೆ ಮೃದುಗೊಳಿಸಿದಂತೆ ಗೋಚರಿಸುತ್ತದೆ.

ತಮ್ಮ ಪ್ರವಾಸ ಕಥನಗಳಲ್ಲಿ ಮೂವರೂ ಲೇಖಕರೂ ಭಾಷೆ ಶೈಲಿಗಳನ್ನು ಭಿನ್ನವಾಗಿ ಬಳಸಿರುವುದು ಕಂಡು ಬರುತ್ತದೆ. ಈ ಭಿನ್ನತೆಗೆ ಕಾರಣ ಅವರ ದೃಷ್ಟಿಕೋನ, ವ್ಯಕ್ತಿತ್ವ, ಸಾಹಿತ್ಯಿಕ ಪಂಥಗಳು. ಲೇಖಕರು ಪ್ರವಾಸಕ್ಕೆ ಹೋದ ಸಂದರ್ಭಗಳೂ ಸಹ ಈ ಭಿನ್ನತೆಗೆ ಕಾರಣವೆನಿಸುತ್ತವೆ.

### ೪.೨. ಪಂಥಗಳ ಹಿನ್ನೆಲೆ ಹಾಗೂ ಪ್ರವಾಸ ಕಥನಗಳ ಸ್ವರೂಪ

೨೦ನೇ ಶತಮಾನದ ಆಧುನಿಕ ಕನ್ನಡ ಸಾಹಿತ್ಯವನ್ನು ನವೋದಯ ಪ್ರಗತಿಶೀಲ, ನವ್ಯ, ದಲಿತ ಬಂಡಾಯಗಳೆಂಬ ನಾಲ್ಕು ಪಂಥಗಳಲ್ಲಿ ವಿಂಗಡಿಸುವ ರೂಢಿಯಿದೆ. ಆ ಪಂಥಗಳನ್ನು ಕಾಲಮಾನದ ಆಧಾರದ ಮೇಲೆ, ಸಾಹಿತ್ಯಿಕ ದೃಷ್ಟಿಕೋನದ ಆಧಾರದ ಮೇಲೆ ಗುರುತಿಸುವ ಉಪಕ್ರಮವೂ ಕನ್ನಡದಲ್ಲಿದೆ. ಸಾಹಿತ್ಯ ಪಂಥಗಳು ತಮ್ಮವೇ ಆದ ಸಾಮಾನ್ಯ ಲಕ್ಷಣಗಳನ್ನು ಒಳಗೊಂಡಿದ್ದು, ಅವುಗಳ ಸಹಾಯದಿಂದ ಸಾಹಿತ್ಯ ಕೃತಿಗಳನ್ನು ಅರ್ಥೈಸಿಕೊಳ್ಳುವ ಪರಿಪಾಠ ಇದೆ. ಆದರೆ ಸಾಹಿತ್ಯ ಪಂಥಗಳಿಗಿರುವ ಸಾಮಾನ್ಯ ಲಕ್ಷಣಗಳೇ ಆತ್ಯಂತಿಕ ಸತ್ಯವಾದವುಗಳೆಂದು ಹೇಳಲಾಗುವುದಿಲ್ಲ. ನವೋದಯ ಲೇಖಕರು ದಲಿತ ಬಂಡಾಯದ ಲಕ್ಷಣ ದೃಷ್ಟಿಕೋನವುಳ್ಳ ಸಾಹಿತ್ಯ ರಚಿಸಲು ಸಾಧ್ಯವಿದೆ. ಹಾಗೆಯೇ ದಲಿತ ಬಂಡಾಯದ ಲೇಖಕರು ನವ್ಯಪಂಥದ ಲಕ್ಷಣಗಳುಳ್ಳ ಸಾಹಿತ್ಯ ರಚನೆ ಮಾಡಲು ಸಾಧ್ಯವಿದೆ. ಹಾಗಾಗಿ ಸಾಹಿತ್ಯ ಪಂಥಗಳು ಆಯಾ ಕಾಲಕ್ಕೆ ಸೀಮಿತವಾದವುಗಳು ಎಂದು ಗೆರೆ ಕೊರೆದು ಹೇಳಲು ಆಗುವುದಿಲ್ಲ.

ಈ ಹಿನ್ನೆಲೆಯಲ್ಲಿ ಅಮೆರಿಕ ಕುರಿತ ಇಲ್ಲಿನ ಮೂರು ಪ್ರವಾಸ ಕಥನಗಳ ಲೇಖಕರನ್ನೂ, ನವೋದಯ, ನವ್ಯ, ದಲಿತ ಬಂಡಾಯ ಪಂಥಗಳಿಗೆ ಸೇರಿದವರು ಎಂದು ಸ್ಥೂಲವಾಗಿ ಹೇಳಬಹುದು. ಆ ಪಂಥಗಳ ಸಾಮಾನ್ಯ ಲಕ್ಷಣಗಳು ಇಂತಿವೆ :

ನವೋದಯವು ಆನುಭಾವಿಕ ಸೆಳೆತ, ನಿಸರ್ಗ ವರ್ಣನೆಯಲ್ಲಿ ತನ್ಮಯತೆ, ಉದಾರ ಮಾನವತಾವಾದ, ಸಹನೆ, ಮುಂತಾದ ಗುಣಗಳನ್ನು ಒಳಗೊಂಡಿದೆ. ನವ್ಯವು ವ್ಯಕ್ತಿ ವಿಶಿಷ್ಟವಾದಿ ಮೌಲ್ಯ, ಪ್ರಾಮಾಣಿಕ ಅನುಭವ ಪ್ರಕಟಣೆ, ವ್ಯಂಗ್ಯ, ವಿಡಂಬನೆ, ವಿಮರ್ಶಾಗುಣ ಆತ್ಮವಿಮರ್ಶೆ, ಯಾವುದನ್ನೂ ಒಪ್ಪಿಕೊಳ್ಳದೇ ಅನುಮಾನದಿಂದ ಕಾಣುವುದು, ಇತ್ಯಾದಿ ಲಕ್ಷಣಗಳನ್ನು ಒಳಗೊಂಡಿದೆ. ಬಂಡಾಯವು ತಳಸಮುದಾಯದ, ಶೋಷಿತರಪರವಾದ ನಿಲವು, ಪ್ರಭುತ್ವದ ವಿರೋಧಿ ಗುಣ ಮುಂತಾದವುಗಳನ್ನು ಒಳಗೊಂಡಿದೆ. ಸಾಹಿತ್ಯ ಪಂಥಗಳ ಈ ಕೆಲವು ಸಾಮಾನ್ಯ ಲಕ್ಷಣಗಳ ಹಿನ್ನೆಲೆಯಲ್ಲಿ ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳು ಹೇಗೆ ರೂಪ ಪಡೆದಿವೆ ಎಂಬುದನ್ನು ಈಗ ನೋಡಬಹುದಾಗಿದೆ.

ನವೋದಯ ಪಂಥದ ಎ.ಎನ್. ಮೂರ್ತಿರಾವ್ ಅವರ 'ಅಪರವಯಸ್ಕನ ಅಮೆರಿಕಯಾತ್ರೆ'ಯಲ್ಲಿ ಉದಾರತೆ, ಮಾನವೀಯತೆ ನಿಲುವಿನಿಂದ ಕೂಡಿದ ಜೀವನದ ಚಿತ್ರಿಸುವಿಕೆ ಕಾಣಬಹುದು. ಲೇಖಕರು ತಮ್ಮ ವೈಯಕ್ತಿಕ ಜೀವನದಲ್ಲಿ ಸೊಸೆ ಮತ್ತು ಮಡದಿಯೊಂದಿಗೆ ವ್ಯವಹರಿಸುವಾಗ ಸಮಾನ ಸ್ಥಾನಮಾನ, ಮುಕ್ತ ವಾಕ್ ಸ್ವಾತಂತ್ರ್ಯಕ್ಕೆ ಮಹತ್ವ ನೀಡುತ್ತಾರೆ. ಅಮೆರಿಕದ ಕ್ರಿಶ್ಚಿಯನ್ ಸೊಸೆ ಮನೆಗೆ ಬಂದರೆ ಅವಳ ಪ್ರತಿಕ್ರಿಯೆ ಹೇಗಿರುತ್ತದೊ ಏನೋ? ಎಂದು ಲೇಖಕರು ಶಂಕೆ ವ್ಯಕ್ತಪಡಿಸುತ್ತಾರೆ. ತಮ್ಮ ಮಡದಿಯ ಬಗೆಗೆ ವಿಶ್ವಾಸ ಹೊಂದಿರುವ ಲೇಖಕರು ತಮ್ಮ ಒಂದು ನೆನಪವನ್ನು ಹೀಗೆ ಬಿಚ್ಚಿಡುತ್ತಾರೆ.

"ಅವಳು ನ್ಯಾನ್ಸಿಯ ಮನಸ್ಸನ್ನು ನೋಯಿಸುವುದಿಲ್ಲ. ಆ ವಿಷಯದಲ್ಲಿ ನನಗೆ ಸಂದೇಹವಿಲ್ಲ. ಆದರೆ ತಾನು ಒಳಗೆ ಎಷ್ಟು ನೊಂದು ಕೊಳ್ಳುತ್ತಾಳೆಯೊ! ನ್ಯಾನ್ಸಿಗೆ ಹೇಳಬೇಕಾದ್ದನ್ನು ರಾಜು ಹೇಳುತ್ತಾನೆ. ಜಯಲಕ್ಷ್ಮಿಗೆ ನಾನು ಏನು ಹೇಳಲಿ ಈ ಅತ್ತೆಸೊಸೆಯರು ಹೊಂದಿಕೊಂಡಿರಲೆಂದು, ಅದು ಸಾಧ್ಯವಲ್ಲದಿದ್ದರೆ, ಒಬ್ಬರನ್ನೊಬ್ಬರು ನೋಯಿಸದಿರಲೆಂದು ತನ್ನ ಉತ್ಕಟವಾದ ಆಸೆ. ಜಯಲಕ್ಷ್ಮಿಗೆ ಏನು ಹೇಳಲಿ ಅವಳ ನಂಬಿಕೆಗೆ ವಿರುದ್ಧವಾಗಿ ನಡೆದುಕೊಳ್ಳಬೇಕೆಂದು ಹೇಗೆ ಒತ್ತಾಯ ಪಡಿಸಲಿ? ನಾನು ಲಘುವಾಗಿ ಸೂಚನೆ ಕೊಟ್ಟರೂ ಅವಳಿಗೆ ಅದು ಒತ್ತಾಯವಾಗಿಯೇ ಪರಿಣಮಿಸುತ್ತದೆ" (ಪು. ೪೨).

ಈ ನೆನಪು ಲೇಖಕರ ಉದಾರ ಸ್ವಭಾವವನ್ನು, ಸಮಾನತಾ ಮನೋಭಾವವನ್ನು ತಿಳಿಸುತ್ತದೆ. ತಮ್ಮ ಮಡದಿ ಸೊಸೆಯೊಡನೆ ಹೇಗೆ ನಡೆದುಕೊಳ್ಳುವಳೊ, ಮೇಲುನೋಟಕ್ಕೆ ಉದಾರವಾಗಿ ಕಂಡರೂ ಅಂತರಾಳದಲ್ಲಿ ಅವಳಿಗೆ ಪಾಪಪ್ರಜ್ಞೆ ಕಾಡಿ ಅವಳ ಮನ ನೋಯುವುದೇನೊ? ಎಂದು ಸಂದೇಹಿಸಿ ಆತಂಕ ಪಡುತ್ತಾರೆ. ಆತಂಕಗೊಳ್ಳುವುದು ಲೇಖಕರು ಮಡದಿ ಮೇಲಿನ ಪ್ರೀತಿಯನ್ನು ಜತೆಗೆ ಹೃದಯ ವೈಶಾಲ್ಯತೆಯನ್ನು ತಿಳಿಸುತ್ತದೆ. ಪೂರ್ವಾತ್ಯ-ಪಾಶ್ಚಾತ್ಯ ಸಂಸ್ಕೃತಿಗಳ ಏಕೀಭವಿಸುವಾಗ ಸಂಘರ್ಷಗಳಾಗುವುದು ಸಹಜ. ಅಂತಹ ಸಂದರ್ಭದಲ್ಲಿ ಲೇಖಕರು ತಮ್ಮ ಮಡದಿಯ ಅಂತರಾಳದ ಮಾತುಗಳನ್ನು ತಾವೇ ಆಡಿದಂತೆ ಅಭಿವ್ಯಕ್ತಿಸುತ್ತಾರೆ. ಇದು ಅವರ ಹೃದಯದ ನಿಷ್ಕಲ್ಮಶತೆಯನ್ನು ಜೀವನ ಪ್ರೀತಿಯನ್ನು ಉದಾರತೆಯನ್ನು ತೋರಿಸುತ್ತದೆ. ಹೆಣ್ಣಿನ ಮೇಲೆ ದೌರ್ಜನ್ಯದಿಂದ ದರ್ಪದಿಂದ ವರ್ತಿಸುವ ಅನೇಕ ಗಂಡಿನ ವರ್ತನೆಗಳ ನಡುವೆ ಲೇಖಕರು ಹೆಣ್ಣಿಗೂ ಕೂಡ ತಮ್ಮದೇ ಆದ ಅಭಿವ್ಯಕ್ತಿ ಸ್ವಾತಂತ್ರ್ಯವಿದೆ ಎಂಬುದನ್ನು ಹೇಳುತ್ತಾರೆ. ಹೀಗೆ ಸ್ವಧರ್ಮ, ದೇಶ, ಸಂಸ್ಕೃತಿ ಬಗೆಗೆ ಅಭಿಮಾನ, ಹೆಮ್ಮೆ, ಅನ್ಯರ ಬಗೆಗೆ ಗೌರವ ಸಹನೆ, ಸಾರ್ವಕಾಲಿಕ ಮೌಲ್ಯದ ಮಾತುಗಳನ್ನು ಪ್ರವಾಸ ಕಥನದ ಅನೇಕ ಸಂದರ್ಭಗಳಲ್ಲಿ ಕಾಣಬಹುದಾಗಿದೆ.

ನವ್ಯಪಂಥದ ಲಕ್ಷಣಗಳುಳ್ಳ ಬಿ.ಜಿ.ಎಲ್. ಸ್ವಾಮಿಯವರು ತಮ್ಮ ಬರವಣಿಗೆಯಲ್ಲಿ ಹಾಸ್ಯ, ವ್ಯಂಗ್ಯ, ವಿಡಂಬನೆ, ವ್ಯಕ್ತಿ ವಿಶಿಷ್ಟವಾದಿ ನಿಲುವುಗಳ ಮೂಲಕ ಭಿನ್ನವಾಗಿ ಬರೆಯಲು ಯತ್ನಿಸಿದ್ದಾರೆ. ಅವರು ಪ್ರವಾಸ ಕಥನದ ಮುನ್ನುಡಿಯಲ್ಲಿ ಅಮೆರಿಕದ ಬಗೆಗೆ ನೇರವಾಗಿ ಹೀಗೆ ಹೇಳುತ್ತಾರೆ :

"ಅಮೆರಿಕಕ್ಕೆ ಇನ್ನೂ ಗಡ್ಡ ಮೀಸೆ ಬಂದಿಲ್ಲವೆಂದು ಯುರೋಪು ನಗಬಹುದು; ಯುರೋಪಿಗೆ ತಲೆ ನೆರೆತು ಪಟ್ಟೆ ಬಿದ್ದಿದೆ ಎಂದು ಅಮೆರಿಕ ನಗಬಹುದು. ಅಮೆರಿಕಕ್ಕೆ ಆಗರ್ಭ ಶ್ರೀಮಂತಿಕೆ ಇಲ್ಲವಾದರೆ, ಯುರೋಪಿಗಿರುವುದು ಗತವೈಭವದ ಕನವರಿಕೆ; ಅಮೆರಿಕದ್ದು ಡಾಲರ್‌ನ ಹೆಮ್ಮೆ; ಯುರೋಪಿನದು ಬಂಡವಾಳವಿಲ್ಲದ ಬಡಾಯಿ ಅಮೆರಿಕದ ಸಂಸ್ಕೃತಿ ಅಪಕ್ವವಾದ ಅಡಿಗೆ, ಯೂರೋಪಿನ ಸಂಸ್ಕೃತಿ ತಂಗಳ ಕೂಳು" (ಮುನ್ನುಡಿಯಿಂದ).

ದೇಶಗಳ ಬಗೆಗೆ ಅವುಗಳ ಓರೆಕೋರೆ ಕುರಿತು ಹೀಗೆ ಖಚಿತವಾಗಿ, ಹರಿತವೆಂಬಂತೆ ನೇರವಾದ ರೀತಿಯಲ್ಲಿ ಮಾತನಾಡುವುದು ಸ್ವಾಮಿಯವರ ವೈಶಿಷ್ಟ್ಯತೆಯನ್ನು ತಿಳಿಸುತ್ತದೆ. ಯಾವುದೇ ವಿಷಯದ ಬಗೆಗಿನ ಟೀಕೆ ಸರಳವಾದದ್ದಲ್ಲ. ಅಲ್ಲಿನ ಪ್ರತಿಯೊಂದು ಅಂಶಗಳ ಬಗೆಗೆ ತಿಳಿದುಕೊಂಡು ಒಳಿತು-ಕೆಡಕುಗಳ ಬಗೆಗೆ ನಿರ್ಧರಿಸಬೇಕಾಗುತ್ತದೆ. ಸ್ವಾಮಿಯವರು ಅಮೆರಿಕದ ಇತಿಹಾಸವನ್ನು ತಿಳಿದುಕೊಂಡು ಅದರ ಓರೆಕೋರೆಗಳ ಬಗೆಗೆ ಟೀಕೆ ಮಾಡಲು ಸಾಧ್ಯವಾಗಿದೆ. ಹಡಗಿನಲ್ಲಿ ಶೌಚದ ಏಕಾಂತಕ್ಕೆ ಭಂಗ ಬಂದಾಗ, ಅಮೆರಿಕನ್ ಸ್ತ್ರೀಯರ ಟೋಪಿಯ ಮೇಲಣ ಹುಚ್ಚು, ಮೆಚ್ಚು, ಸೀರೆಯ ಹಗರಣ ಸೆಕ್ರೆಟರಿಯ ಥ್ರಿಲ್, ಮಿಸ್ಟರ್ ಮತ್ತು ಮಿಸಸ್ ಟಬ್ ದಂಪತಿಗಳ ನಡೆನುಡಿಗಳು ಓದುಗರನ್ನು ನಗಿಸುತ್ತವೆ. ಅಮೆರಿಕನ್ನರ ಸ್ವಾಭಿಮಾನ ಹಟ ಮಂದ ಬುದ್ಧಿ ಅತಿರೇಕದ ವರ್ತನೆ, ಧಾರ್ಮಿಕತೆಯ ಬಗೆಗೆ ವ್ಯಂಗ್ಯ ಮಾಡುವುದು ನಗೆಯಾಗಿ ಪರಿಚಯಿಸುತ್ತಾರೆ. ಇದು ಮಾನವ ಗುಣಗಳು ಅಮೆರಿಕದಲ್ಲಿದ್ದರೂ ಒಂದೇ ಉಳಿದ ದೇಶಗಳಲ್ಲಿದ್ದರೂ ಒಂದೇ ಆಗಿರುತ್ತವೆ ಎಂಬುದನ್ನು ತಿಳಿಸುತ್ತದೆ. ಇದು ಅಮೆರಿಕನ್ನರನ್ನು ನಮ್ಮಂತಯೇ ಅವರು ಅವರಂತೆ ನಾವು ಎಂಬ ಲೇಖಕರ ನಂಬಿಕೆಯನ್ನು ತಿಳಿಸುತ್ತದೆ.

ಸಾರಾ ಅವರು ಬಂಡಾಯ ಪಂಥದ ಸಾಮಾನ್ಯ ಲಕ್ಷಣಗಳನ್ನುಳ್ಳ ಲೇಖಕಿಯಾಗಿ, ದಮನಿತರ ಪರವಾಗಿ, ಶೋಷಣೆಯ ವಿರುದ್ಧವಾಗಿ ಮಹಿಳೆಯರ ಪರವಾಗಿ, ಪುರುಷಶಾಹಿಯ ವಿರುದ್ಧವಾಗಿ ಚಿಂತಿಸಿರುವುದು ಕಂಡು ಬರುತ್ತದೆ. ಸಾಮಾನ್ಯವಾಗಿ ಅಮೆರಿಕದಲ್ಲಿ ಬಡತನವೆಂಬುದಿಲ್ಲ. ಅಲ್ಲಿ ಎಲ್ಲರೂ ಶ್ರೀಮಂತರಾಗಿದ್ದಾರೆ. ಸಮಾನತೆಯಿಂದ ಕಾಣಲಾಗುತ್ತದೆ. ಯಾವುದೇ ತಾರತಮ್ಯ ಇಲ್ಲ ಎಂಬ ಕಲ್ಪನೆಗಳು ಇವೆ. ಇವುಗಳಿಗೆ ಪ್ರತಿಯಾಗಿ ಸಾರಾ ಅಮೆರಿಕದಲ್ಲಿಯೂ ಕೂಡ ಶೋಷಿತರು ಬಡವರು ದಮನಿತರು ಇದ್ದಾರೆ ಎಂಬುದನ್ನು ತಮ್ಮ ಪ್ರವಾಸ ಕಥನದಲ್ಲಿ ಕಾಣಿಸುತ್ತಾರೆ.

ಕೆಲವು ತಿಂಗಳುಗಳ ಹಿಂದೆ ಈ ಕಸ ಗುಡಿಸುವವರು ಅಧಿಕ ಸಂಬಳಕ್ಕಾಗಿ ಮುಷ್ಕರ ಹೂಡಿದ್ದರು. ವರ್ಷಕ್ಕೆ ನೂರಿನ್ನೂರು ಕೋಟಿ ಡಾಲರ್ ಲಾಭ ಗಳಿಸುವ ಕಂಪನಿಗಳು ತಮ್ಮ ಈ ಚಿಕ್ಕ ಕೋರಿಕೆಗಳನ್ನು ಈಡೇರಿಸುವುದಿಲ್ಲ ಏಕೆಂಬುದು ಇವರ ಪ್ರಶ್ನೆ. ಆದರೆ ಕಂಪನಿ ವಿವರಣೆ ಬೇರೆ. ತಾವು ಇವರನ್ನು ನೇರವಾಗಿ ಕೆಲಸಕ್ಕೆ ಸೇರಿಸಿಕೊಂಡಿಲ್ಲ. ಇಂತಹ ಕೂಲಿಕಾರರನ್ನು ಸರಬರಾಜು ಮಾಡುವ ದಲ್ಲಾಳಿ ಕಂಪನಿಗಳು ಇವರನ್ನು ತಮಗೆ ಸರಬರಾಜು ಮಾಡಿವೆ. ಆದುದರಿಂದ ಇವರ ಸಮಸ್ಯೆಗಳಿಗೆ ಈ ದಲ್ಲಾಳಿಗಳೇ ಜವಾಬ್ದಾರರೇ ಹೊರತು ತಾವಲ್ಲ ಎಂದು ಜಾರಿಕೊಳ್ಳುತ್ತಾರೆ. ಇಂತಹ ಕೆಳಮಟ್ಟದ ಕೂಲಿಕಾರರು ಯಾವಾಗಲೂ

ಅದೃಶ್ಯರಾಗಿರುತ್ತಾರೆ. ಇವರಿಗೆ ಯಾವ ಪ್ರಾಮುಖ್ಯತೆಯೂ ಇಲ್ಲ. ತಮ್ಮ ವ್ಯಾಪಾರಿ ಸಂಸ್ಥೆಯ ಲಾಭದ ಕಡೆಗಷ್ಟೆ ಈ ಮಾಲಕರ ಗಮನವಿರುತ್ತದೆಯೇ ಹೊರತು ಇಂತಹ ಕಂಪನಿಗಳ ಬೆನ್ನೆಲುಬಾದ ಕೂಲಿಕಾರರ ಆರೋಗ್ಯ ಮತ್ತು ಶಿಕ್ಷಣ ಹಾಗೂ ನೆಮ್ಮದಿಯ ಬದುಕಿನೆಡೆಗೆ ಇವರ ಗಮನಹರಿಯುವದಿಲ್ಲ ಎಂದು ಲೇಖಿಕಿ ಖಾರವಾಗಿ ಪ್ರತಿಕ್ರಿಯಿಸುತ್ತಾರೆ.

ಲೇಖಕಿಯ ಈ ಅಭಿಪ್ರಾಯದಿಂದ ತಳಮಟ್ಟದ ಸಮುದಾಯಗಳು ಎಂತಹ ಐಷಾರಾಮಿ, ಮುಂದುವರಿದ ದೇಶಗಳಲ್ಲೂ ಸಹ ತಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡುತ್ತಲೇ ಇರುತ್ತವೆ ಎಂಬುದನ್ನು ತಿಳಿಯಬಹುದಾಗಿದೆ. ಅದಿಷ್ಟೆ ಅಲ್ಲದೆ ಅಮೆರಿಕದ ಕರಿಯರ ಜೀವನ ಚಿತ್ರಣವೂ ಇಲ್ಲಿದೆ. ದುಷ್ಕೃತ್ಯಗಳನ್ನು ತಡೆಯುವಲ್ಲಿ ವಿಫುಲವಾದ ಸರ್ಕಾರವನ್ನು ಲೇಖಕಿ ವಿರೋಧಿಸುತ್ತಾರೆ. ಮುಖ್ಯವಾಗಿ ಸ್ತ್ರೀಪರ ಚಿಂತನೆ, ಪ್ರವಾಸ ಕಥನದುದ್ದಕ್ಕೂ ಕಂಡು ಬರುತ್ತದೆ.

### ೪.೩. ಪ್ರವಾಸ ಕಥನಗಳ ಶೀರ್ಷಿಕೆಗಳು

ಸಾಮಾನ್ಯವಾಗಿ ಕೃತಿಯ ಶೀರ್ಷಿಕೆಗಳು ಆ ಕೃತಿಯೊಳಗೆಯೇ ಒಂದು ರೀತಿಯ ಆತಂರಿಕ ಸಂಬಂಧವನ್ನು ಪಡೆದಿರುತ್ತವೆ. ಅದರಂತೆ ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳು ಶೀರ್ಷಿಕೆಯಲ್ಲಿ ಪಡೆದಿರುವ ಧ್ವನಿಯ ಅರ್ಥವನ್ನು ಹುಡುಕುವುದಕ್ಕೆ ಇಲ್ಲಿ ಯತ್ನಿಸಬಹುದು.

ಅಕ್ಕಿ ಹೆಬ್ಬಾಳ ನರಸಿಂಹ ಮೂರ್ತಿರಾವ್, ಅವರು ತಮ್ಮ ಪ್ರವಾಸ ಕಥನದ ಶೀರ್ಷಿಕೆಗೆ ವೈಯಕ್ತಿಕ ಕಾರಣಗಳನ್ನು ಕೊಡುತ್ತಾರೆ. ಲೇಖಕರು ಅಮೆರಿಕೆಗೆ ಹೋಗುತ್ತಿರುವುದು ತಮ್ಮ ಎಪ್ಪತ್ತೂ೦ರನೇ ವಯಸ್ಸಿನಲ್ಲಿ. ಅಪರ ವಯಸ್ಸಿನಲ್ಲಿ. ಆದರೆ ತಮ್ಮ ಅಪರವಯಸ್ಸನ್ನು ಲೆಕ್ಕಿಸದೇ ಯುವಕರ ಮನೋಬಲವನ್ನು ತುಂಬಿಕೊಂಡು ಅಮೆರಿಕ ಪ್ರವಾಸ ಕೈಗೊಳ್ಳುತ್ತಾರೆ. ವಯಸ್ಸೆಂಬುದು ದೇಹಕ್ಕೆ ಹೊರತು ಮನಸ್ಸಿಗಲ್ಲ ಎಂದು ಇಲ್ಲಿ ತಿಳಿಯುತ್ತದೆ. ಲೇಖಕರು ತಮಗೆ ಪ್ರವಾಸದ ಹುಚ್ಚು ಹೆಚ್ಚೆಂದೂ, ಅದಕ್ಕೆ ತಮ್ಮ ಇಳಿವಯಸ್ಸು ಅಡ್ಡಿಪಡಿಸಲಿಲ್ಲ ಎಂಬುದನ್ನು ಪ್ರವಾಸ ಕಥನದ ಮೊದಲ ಭಾಗದಲ್ಲಿ ಹೇಳಿಕೊಳ್ಳುತ್ತಾರೆ. ಅದರಂತೆ ಇಳಿವಯಸ್ಸಿನ ಆದರೆ ಯುವಕ ಮನೋಧರ್ಮದ ವ್ಯಕ್ತಿಯ ಪ್ರವಾಸ ಕಥನವಿದು ಎಂಬರ್ಥದಲ್ಲಿ 'ಅಪರವಯಸ್ಕನ ಅಮೆರಿಕಯಾತ್ರೆ'ಯನ್ನು ಗ್ರಹಿಸಬಹುದು.

ಲೇಖಕರು ಈ ಪ್ರವಾಸ ಕಥನವನ್ನು ಯಾತ್ರೆ ಎಂದು ಕರೆದುಕೊಳ್ಳುತ್ತಾರೆ. ಯಾತ್ರೆ ಎಂಬ ಪದವು ಪುಣ್ಯ ಸ್ಥಳಗಳಿಗೆ ಹೋಗುವ ಒಂದು ಪದ್ಧತಿಗೆ ಸಂಬಂಧಿಸಿದ್ದು. ಆದರೆ ಪಶ್ಚಿಮ ಸಂಸ್ಕೃತಿಯ ದೇಶವೊಂದಕ್ಕೆ ಹೋದದ್ದನ್ನು 'ಯಾತ್ರೆ' ಎಂದು ಸಂಬೋಧಿಸಿರುವುದು ಮೂರ್ತಿರಾವ್ ಅವರ ಸಂಸ್ಕೃತಿಗಳನ್ನು ಸಮಾನವಾಗಿ ನೋಡುವ ಮನೋಭಾವವನ್ನು ತಿಳಿಸುತ್ತದೆ. ಲೇಖಕರು ಸ್ವದೇಶದ ಬಗೆಗೆ ಗೌರವ ಸ್ವಾಭಿಮಾನ ಹೊಂದಿರುವಂತೆಯೇ ಪರದೇಶಗಳ ಬಗೆಗೂ ಗೌರವಯುತ ಮನೋಭಾವನೆ ಹೊಂದಿರುವ ಮನಸ್ಸಿಗೆ ಹೀಗೆ ಬರೆಯಲು ಸಾಧ್ಯವಾಗಿದೆ. ಅಮೆರಿಕ ದೇಶವೂ ಸಹ ನಮ್ಮಂತೆ ಜನರಿರುವ ಒಂದು ಪುಣ್ಯಸ್ಥಳ ಎಂಬ ಭಾವನೆಯಿಂದ ಅಲ್ಲಿಗೆ ಹೋಗಿರುವ ಅದನ್ನು ಯಾತ್ರೆಗೆ ಹೋಲಿಸುತ್ತಾರೆ.

ಸ್ವಾಮಿಯವರು ಅಮೆರಿಕೆಗೆ ಹೋದ ಅನುಭವಕ್ಕೆ 'ಅಮೆರಿಕದಲ್ಲಿ ನಾನು' ಎಂದು ಶೀರ್ಷಿಕೆ ನೀಡಿದ್ದಾರೆ. ಅವರು ವಿಚಾರಪರ ವ್ಯಕ್ತಿವಾದಿ ಲೇಖಕರಾಗಿರುವುದರಿಂದ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಹೆಚ್ಚಿನ ಮಹತ್ವ ನೀಡಿದ್ದರಿಂದ 'ನಾನು' ಎಂಬ ಸರ್ವನಾಮ ಬಂದಿರಬಹುದು. 'ನಾನು' ಎಂಬ ಸರ್ವನಾಮಕ್ಕೆ ನವ್ಯಪಂಥ ಒಂದೇ ಕಾರಣವಾಗಿರದೇ ಅಮೆರಿಕೆಯೂ ಕಾರಣವಾಗಿದೆ. ಪಾಶ್ಚಾತ್ಯರು ವ್ಯಕ್ತಿ ಸ್ವಾತಂತ್ರ್ಯವನ್ನು ಬಯಸುವಂತಹವರು. ತಮ್ಮ ಇಷ್ಟಾನಿಷ್ಟಗಳನ್ನು ಪೂರೈಸಿಕೊಳ್ಳಲು ಎಂತಹ ಕಾರ್ಯಮಾಡಲೂ ಸಿದ್ಧರಿರುವಂತಹವರು. ಅಮೆರಿಕನ್ನರ ಅಭಿವ್ಯಕ್ತಿ ಸ್ವಾತಂತ್ರ್ಯ ಯಾವ ರೀತಿ ವ್ಯಕ್ತವಾಗಿದೆ ಎಂಬುದನ್ನು ತಿಳಿಯುವುದಕ್ಕಾಗಿಯೂ 'ನಾನು' ಎಂಬ ಸರ್ವನಾಮ ಬಳಕೆಯಾಗಿರಬಹುದು.

ಲೇಖಕರು ಅಭಿವ್ಯಕ್ತಿ ಸ್ವಾತಂತ್ರ್ಯ ಅಮೆರಿಕದಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದನ್ನು ಪ್ರವಾಸ ಕಥನದಲ್ಲಿ ಅನೇಕ ಪ್ರಸಂಗಗಳ ಮೂಲಕ ಸೂಚಿಸುತ್ತಾರೆ. 'ಸೀರೆಯ ಕತೆ' ಎಂಬ ಅಧ್ಯಾಯದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ಒಂದು ಉಲ್ಲೇಖ ಬರುತ್ತದೆ. ಪಾರ್ಟಿಯಲ್ಲಿ ಸೀರೆ ಉಡಲು ಪೆಗ್ಗಿ ಎಂಬ ಮಹಿಳೆ ಬಯಸಿದ್ದು ಅವಳ ಗಂಡ ಮೊದಲು ವಿರೋಧಿಸುತ್ತಾನೆ. ಆ ವಿರೋಧನ ನಡುವೆ ಅವಳು ತನ್ನಿಷ್ಟದಂತೆ ಸೀರೆ ಉಟ್ಟು ಪಾರ್ಟಿಗೆ ಹೋಗುತ್ತಾಳೆ. ನಂತರ ಗಂಡನೂ ಕೂಡ ಹೆಚ್ಚು ವಿರೋಧಿಸುವುದಿಲ್ಲ. ಇದು ಅಮೆರಿಕನ್ನರು ಪರಸ್ಪರರ ಅಭಿರುಚಿಗೆ, ಸ್ವಾತಂತ್ರ್ಯಕ್ಕೆ ಗೌರವ ನೀಡುವುದರ ಸಂಕೇತ.

'ಕಾರು ನನ್ನ ಸೆಕ್ರಟರಿ ಕೋರ್ಟು' ಎಂಬ ಅಧ್ಯಾಯದಲ್ಲಿ ತಮ್ಮ ಕಾರ್ಯದರ್ಶಿಯ ಒಂದು ಪ್ರಸಂಗ ತರುತ್ತಾರೆ. ಕಾರು ಚಾಲನೆ ಮಾಡುವಾಗ ರಭಸವಾಗಿ ಓಡಿಸಿ ರೋಮಾಂಚನಕಾರಿ ಅನುಭವವನ್ನು ಪಡೆಯಬೇಕೆಂದು ಮುಕ್ತವಾಗಿ ತಮ್ಮ ಬಳಿ ಸೆಕ್ರಟರಿ ಹೇಳಿದ್ದನ್ನು ಲೇಖಕರು ಹೇಳುತ್ತಾರೆ. ಅದೇ ರೀತಿ ಅವಳು ರಭಸವಾಗಿಯೇ ಕಾರು ಚಾಲನೆ ಮಾಡುತ್ತಾಳೆ. ಇದು ಸಹ ಅಮೆರಿಕನ್ನರು ಅಭಿರುಚಿ ಸ್ವಾತಂತ್ರ್ಯಕ್ಕೆ ನೀಡುವ ಮಹತ್ವವನ್ನು ತಿಳಿಸುತ್ತದೆ. ಹೀಗೆ 'ಅಮೆರಿಕದಲ್ಲಿ ನಾನು' ಎಂಬ ಕೃತಿಯ ಶೀರ್ಷಿಕೆಯಲ್ಲಿರುವ ನಾನು ಎಂಬ ಸರ್ವನಾಮವು ಸ್ವಂತಿಕೆಯ ವ್ಯಕ್ತಿ ಸ್ವಾತಂತ್ರ್ಯದ ಸ್ವಹಿತಾಸಕ್ತಿಯ, ಅನೇಕ ಅರ್ಥಗಳನ್ನೊಳಗೊಂಡು ಬಳಕೆಯಾಗಿರುವುದು ಕಂಡು ಬರುತ್ತದೆ.

ಸಾರಾ ಅವರ 'ಐಷಾರಾಮದ ಆಳದಲ್ಲಿ' ಕೃತಿಯ ಶೀರ್ಷಿಕೆಯ ಔಚಿತ್ಯ ಬೇರೆ ಬಗೆಯಲ್ಲಿದೆ. ಅಮೆರಿಕ ಎಂದಾಕ್ಷಣ ಜಗತ್ತಿನ ಬಹುತೇಕ ಜನರು ಭಾವಿಸುವುದು ಅದೊಂದು ಶ್ರೀಮಂತರ ನಾಡು; ಅಲ್ಲಿ ಕೇವಲ ಸುಖಿಗಳು ಮಾತ್ರ ಜೀವಿಸುತ್ತಾರೆ; ಅಲ್ಲಿ ಯಾವುದೇ ಕೊರತೆಗಳಿಲ್ಲ; ಅಮೆರಿಕನ್ನರದು ಐಷಾರಾಮದ ಬದುಕು - ಇತ್ಯಾದಿ. ಇದು ಹೊರನೋಟದ ವಾಸ್ತವ. ಆದರೆ 'ಆಳ'ದಲ್ಲಿ ದುಃಖ ಅತೃಪ್ತಿ, ಬಡತನ, ಅರಾಜಕತೆ ಅನೇಕ ಕೊರತೆಗಳಿವೆ ಎಂಬುದನ್ನು ಸಾರಾ ಅವರು ತೋರಿಸಿಕೊಡುತ್ತಾರೆ. ಅಮೆರಿಕದ ಜನಜೀವನ ಅಲ್ಲಿನ ಸ್ತ್ರೀಯರ ಸ್ಥಾನಮಾನಗಳು, ಅಲ್ಲಿನ ಶ್ರೀಮಂತಿಕೆಯಲ್ಲಿಯೂ ಅಸಮಾನತೆ, ಕ್ರೌರ್ಯ ಭಾವನೆ, ಅಸಮಾಧಾನ, ಅತೃಪ್ತಿ ಇರುವುದು; ಶಸ್ತ್ರಾಸ್ತ್ರಗಳು ಮುಕ್ತವಾಗಿ ಮಾರುಕಟ್ಟೆಯಲ್ಲಿ ದೊರಕುವುದರಿಂದ ಕೊಲೆ ಸುಲಿಗೆಗಳು ರಾಜಾರೋಷವಾಗಿ ನಡೆಯವುದು, ಇವೆಲ್ಲ ದುರಂತಗಳನ್ನು ಕೃತಿ ಕಾಣಿಸುತ್ತದೆ.

ಅಮೆರಿಕದಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಹೆಚ್ಚಿನ ಮಹತ್ವ ಇದೆ. ಅದಕ್ಕೆ ಧಕ್ಕೆ ಬಂದಲ್ಲಿ ಕುಟುಂಬಗಳು ಹೋಳಾಗುವ ಸಾಧ್ಯತೆಗಳು ಹೆಚ್ಚಾಗಿರುತ್ತವೆ. ಆದರೆ ಅನೇಕ ಮಹಿಳೆಯರು ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದಾಗಲೂ ಅನೇಕ ಸಮಸ್ಯೆಗಳನ್ನು ಸಹಿಸಿಕೊಂಡು ಹೊಂದಾಣಿಕೆಯ ಜೀವನ ಸಾಗಿಸುವುದನ್ನು ಲೇಖಕಿ ದಾಖಲಿಸುತ್ತಾರೆ. ಪ್ರಪಂಚದ ಯಾವುದೇ ದೇಶವೂ ಪುರುಷಪ್ರಧಾನ ವ್ಯವಸ್ಥೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ. ಸಾಮಾಜಿಕ ವ್ಯವಸ್ಥೆಯ ನಿಯಮಗಳು ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಜಗತ್ತಿನ ಎಲ್ಲಾ ದೇಶಗಳಲ್ಲೂ ಅಸ್ತಿತ್ವದಲ್ಲಿರುತ್ತವೆ. ಇದು ಆಳಕ್ಕೆ ಕಣ್ಣಿಟ್ಟು ಗಮನಿಸಿದಾಗ ಮಾತ್ರ ಕಾಣುವುದು ಎಂಬುದನ್ನು ಕೃತಿಯ ತಲೆಬರಹ ಧ್ವನಿಸುತ್ತದೆ.

**ಟಿಪ್ಪಣಿ**

೧. ವಿದ್ಯಾಶಂಕರ, **ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ**, ಪು. ೮೭.

* * *

അധ್ಯಾಯ ೫

# ಉಪಸಂಹಾರ

## ೫.೧. ಅಧ್ಯಯನದ ಮುಖ್ಯ ಫಲಿತಗಳು

ಅಮೆರಿಕ ಕುರಿತ ಮೂರು ಪ್ರವಾಸ ಕಥನಗಳ ಅಧ್ಯಯನದಲ್ಲಿ ಕೆಲವು ಪ್ರಮುಖವಾದ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ಅವು ಇಂತಿವೆ :

೧. ಪ್ರವಾಸ ಕಥನಗಳನ್ನು ರಚಿಸುವಾಗ ಕನ್ನಡದ ಸಂವೇದನಾಶೀಲ ಲೇಖಕರು ಮಾಹಿತಿ ಪ್ರಧಾನ ಪ್ರವಾಸಿ ಕೈಪಿಡಿಯನ್ನು ರಚಿಸುವುದಿಲ್ಲ. ಬದಲಿಗೆ ಒಂದು ದೇಶದ ಸಾಂಸ್ಕೃತಿಕ ವಿಶ್ಲೇಷಣೆಯ ಭಾಗವಾಗಿ ಪ್ರವಾಸ ಕಥನಗಳನ್ನು ರಚಿಸುತ್ತಾರೆ. ಇದು ಈ ಅಧ್ಯಯನದಲ್ಲಿ ಕಂಡುಕೊಂಡ ಮೊದಲ ಸಂಗತಿಯಾಗಿದೆ.

೨. ನಮ್ಮ ಅತ್ಯುತ್ತಮ ಲೇಖಕರು ಯಾವತ್ತೂ ಮೂಲಭೂತವಾದಿ ಅಥವಾ ಕೋಮುವಾದಿಗಳು ಆಗಿರುವುದಿಲ್ಲ. ಅವರು ಮನುಷ್ಯತ್ವಕ್ಕೆ ಬೆಲೆ ಕೊಡುವವರು. ಇಲ್ಲಿನ ಮೂವರೂ ಲೇಖಕರು ಧರ್ಮದ ವಿಷಯದಲ್ಲಿ ಅಂಧಾಭಿಮಾನಿಗಳಲ್ಲ. ಉದಾರವಾದಿಗಳು. ಅವರಿಗೆ ಧರ್ಮ ಮುಖ್ಯ ಸಂಗತಿಯಲ್ಲ. ಜನ ಅವರ ಕಷ್ಟ-ಸುಖ ಮುಖ್ಯ. ಅವರು ಜನರ ಕಷ್ಟ-ಸುಖ-ಸಂಭ್ರಮಗಳನ್ನು ಚಿತ್ರಿಸುವುದಕ್ಕೆ ಧರ್ಮವನ್ನೂ ಕೂಡ ಟೀಕೆ ಮಾಡಬಲ್ಲರು. ಆದ್ದರಿಂದ ಈ ಪ್ರವಾಸ ಕಥನಗಳಲ್ಲಿ ಒಂದು ಬಗೆಯ ಮಾನವತಾವಾದಿ, ವಿಚಾರವಾದಿ, ಹಾಗೂ ಸಾಂಸ್ಕೃತಿಕ ನೆಲೆಯ ನೋಟಗಳಿವೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೩. ಪ್ರವಾಸ ಕಥನಗಳಲ್ಲಿ ಮಹಿಳೆಯರ ಚಿತ್ರಣವು ಲೇಖಕರಿಗಿಂತ ಲೇಖಕಿಯರು ಭಿನ್ನರಾಗಿ ಚಿತ್ರಿಸುತ್ತಾರೆ. ಒಬ್ಬ ಮಹಿಳೆಯಾದ ಕಾರಣಕ್ಕಾಗಿ ಸಾರಾ ಅಮೆರಿಕ ಮತ್ತು ಭಾರತದ ಮಹಿಳೆಯರ ಸಮಸ್ಯೆಯನ್ನು ಆದ್ಯತೆಯಲ್ಲಿ ಚಿತ್ರಿಸುವುದು, ಉಳಿದ ಲೇಖಕರಿಗಿಂತ ಭಿನ್ನವಾಗಿ ಚಿತ್ರಿಸಿರುವುದು ಕಾಣಬರುತ್ತದೆ. ಪ್ರವಾಸ ಕಥನಗಳಲ್ಲಿ ಬರುವ ಸಂಗತಿಗಳಿಗೂ ಲೇಖಕರ ಲಿಂಗಕ್ಕೂ ಸಂಬಂಧವಿದೆ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೪. ಅಮೆರಿಕದ ಸಾಮಾಜಿಕ, ರಾಜಕೀಯ, ಆರ್ಥಿಕ ವಿಷಯಗಳ ಬಗೆಗೆ ಮೂವರೂ ಲೇಖಕರು ಭಿನ್ನ ನಿಲುವು ತಾಳುತ್ತಾರೆ. ರಾಜಕೀಯ ಪ್ರಜ್ಞೆ ಬಹಳ ಮುಖ್ಯವೆನಿಸಿದ ಲೇಖಕರಲ್ಲಿ, ಶಿಕ್ಷಣ, ಪ್ರಕೃತಿ, ಜನಜೀವನ ಸಂಸ್ಕೃತಿ ಮುಂತಾದ ಸಂಗತಿಗಳು ಮುಖ್ಯವಾಗಿ ಕಥನದಲ್ಲಿ ಜಾಗ ಪಡೆಯುತ್ತವೆ. ಇದನ್ನು ಮೂರ್ತಿರಾವ್‌ರವರಲ್ಲಿ ಕಾಣಬಹುದು. ಅಮೆರಿಕ ಅನುಸರಿಸುವ ಆರ್ಥಿಕ ರಾಜಕಾರಣದ ಮೇಲೆ

ವಿಮರ್ಶಕವಾಗಿದ್ದರೂ ತೀವ್ರವಾದ ಟೀಕೆಯನ್ನು ಮೂವರೂ ಲೇಖಕರು ಮಾಡುವುದಿಲ್ಲ. ಇದು ಈ ಪ್ರವಾಸ ಕಥನಗಳ ರಾಜಕೀಯ ಪ್ರಜ್ಞೆಯ ಮಿತಿಯಾಗಿದೆ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೫. ಮೂಲತಃ ಪ್ರವಾಸ ಕಥನಗಳು ಬೇರೆ ದೇಶದ ಸಂಸ್ಕೃತಿ ಸಮಾಜ, ನಮ್ಮ ದೇಶದ ಸಂಸ್ಕೃತಿಗಿಂತ ಭಿನ್ನ ಎಂಬುದನ್ನು ಹೇಳುವಂತಹುಗಳು. ಮುಖ್ಯವಾಗಿ ಭಾರತದಲ್ಲಿಯೇ ಒಂದೇ ತರಹದ ಆಚರಣೆ ಪದ್ಧತಿಗಳು ಇಲ್ಲ. ಹಾಗಿರುವಾಗ ದೂರದ ಅಮೆರಿಕನ್ನರ ಆಚರಣೆಗಳಿಗೂ ಭಾರತೀಯರ ಆಚರಣೆ ಸಂಪ್ರದಾಯಗಳಿಗೂ ವ್ಯತ್ಯಾಸ ಸಹಜವಾಗಿರುತ್ತದೆ. ಆದರೆ ಮಾನವರು ಕೆಲವು ವಿಚಾರದಲ್ಲಿ ಏಕಪ್ರಕಾರವಾಗಿ ನಡೆದುಕೊಳ್ಳುತ್ತಾರೆ. ಉದಾಹರಣೆಗೆ; ಅಮೆರಿಕನ್ನರು ಕ್ರೈಸ್ತನ ಜನ್ಮ ದಿನಾಚರಣೆಯ ಸಂದರ್ಭದಲ್ಲಿ ಕೋಳಿ ಊಟದ ವಿಶೇಷ ಭೋಜನದ ಸವಿಯುಂಡು ಸಂತೋಷಿಸಿದರೆ, ಭಾರತೀಯರು ಕೃಷ್ಣ, ಬಸವ, ಜನ್ಮ ದಿನಾಚರಣೆಯ ಸಂದರ್ಭದಲ್ಲಿ ಹೋಳಿಗೆ, ಸಿಹಿ ಪದಾರ್ಥಗಳನ್ನು ಸವಿದು ಸಂತೋಷಿಸುವ ವಾಡಿಕೆ ಇದೆ. ಹೀಗೆ ಆಚರಣಾ ಪದ್ಧತಿಗಳಲ್ಲಿ ವ್ಯತ್ಯಾಸಗಳಿದ್ದರೂ ಕೂಡ ಜಗತ್ತಿನ ಮಾನವರು ತಮ್ಮ ಉದ್ದೇಶ ಈಡೇರಿಕೆಗಾಗಿ ಅಂತಹ ಸೌಲಭ್ಯಗಳನ್ನು ಮಾಡಿಕೊಂಡಿರುವುದು ಎಂಬುದು ಮನದಟ್ಟಾಗುತ್ತದೆ. ಹಾಗಾಗಿ ಪ್ರವಾಸ ಕಥನಗಳು ಒಂದು ಬಗೆಯ ವಿಶ್ವದ ಮಾನವರೆಲ್ಲ ಒಂದೇ ಎಂಬ ಸಂದೇಶವನ್ನು ಹೇಳಲು ಪ್ರಯತ್ನಿಸುತ್ತವೆ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೬. ಪ್ರವಾಸ ಕಥನವೆಂಬುದು ಒಂದು ದೇಶದ, ಪ್ರದೇಶದ, ಸಾಂಸ್ಕೃತಿಕ ಚಿತ್ರಣವನ್ನು ಕೊಡುತ್ತದೆ ಎಂಬ ಗ್ರಹಿಕೆಯಿದೆ. ಆದರೆ ಈ ಪ್ರವಾಸ ಕಥನಗಳಲ್ಲಿ ಒಂದು ಪ್ರದೇಶದ ಚಿತ್ರಣವನ್ನಷ್ಟೇ ಕೊಡದೆ ಲೇಖಕರು ಸ್ವದೇಶದ ಸಾಂಸ್ಕೃತಿಕ ಸಂಗತಿಗಳನ್ನೂ ತೌಲನಿಕವಾಗಿ ತರುವುದು ಕಂಡು ಬರುತ್ತದೆ. ಹಾಗೆ ತರುವಾಗ ತಮ್ಮ ದೇಶದ ಅನೇಕ ಸಂಗತಿಗಳನ್ನು ಮೌಲ್ಯಮಾಪನಕ್ಕೆ ಒಡ್ಡುತ್ತಾರೆ. ಹಾಗಾಗಿ ಪ್ರವಾಸ ಕಥನಗಳು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗಿ ಅಲ್ಲಿನ ಸಾಂಸ್ಕೃತಿಕ ಚಿತ್ರಣವನ್ನು ನೀಡುತ್ತವೆ ಎನ್ನುವುದು ಅರ್ಧಸತ್ಯವಾಗಿದೆ. ಅದರ ಜೊತೆಗೆ ಸ್ವದೇಶದ ಸಾಂಸ್ಕೃತಿಕ ಚಿತ್ರಣಗಳನ್ನೂ ಕೂಡ ಒಳಗೊಂಡಿರುತ್ತವೆ ಎಂಬುದು ನಿಜ ಸತ್ಯವಾಗಿದೆ.

### ೫.೨ ಅಧ್ಯಯನದ ಹೊಸ ಸಾಧ್ಯತೆಗಳು

೧. ನಿರ್ದಿಷ್ಟ ದೇಶವನ್ನು ಕುರಿತು ಬಂದಿರುವ ಪ್ರವಾಸ ಕಥನಗಳನ್ನು ಅಧ್ಯಯನಕ್ಕೆ ಅರ್ಥೈಸಿ ಕೊಳ್ಳುವುದು ಒಂದು ಮಿತಿಯಾಗಿ ಕಂಡು ಬಂದಿತು. ಬೇರೆ ಬೇರೆ ಲೇಖಕರಲ್ಲಿ ಅವರದೇ ಆದ ದೃಷ್ಟಿಕೋನಗಳಿರುತ್ತವೆ. ಆದರೆ ಅವುಗಳಷ್ಟೆ ಅಧ್ಯಯನಕ್ಕೆ ಸಾಲುವುದಿಲ್ಲ. ಅದಕ್ಕಾಗಿ ನವೋದಯ ನವ್ಯ ದಲಿತ ಬಂಡಾಯ ಪಂಥಗಳ ಹಿನ್ನೆಲೆಯಿಂದ, ಆ ಪಂಥಗಳ ಸಾಮಾನ್ಯ ಲಕ್ಷಣಗಳನ್ನು ಗಮನಿಸಿ, ಲೇಖಕರ ದೃಷ್ಟಿಕೋನಗಳನ್ನು ವಿಶ್ಲೇಷಿಸುವುದರ ಮೂಲಕ ಪ್ರವಾಸ ಕಥನಗಳನ್ನು ಅರ್ಥೈಸಿಕೊಳ್ಳಲು ಇರುವ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲಾಯಿತು.

೨. ಪ್ರವಾಸ ಕಥನಗಳ ಮೂವರು ಲೇಖಕರು ಮಧ್ಯಮವರ್ಗಕ್ಕೆ ಸೇರಿರುವುದರಿಂದ ಸಾಮಾಜಿಕವಾಗಿ ಕೆಳಸ್ತರದ ನೆಲೆಯಿಂದ ನೋಡುವಾಗ ಸಿಗುವ ನೋಟಗಳು ಪ್ರವಾಸ ಕಥನಗಳಲ್ಲಿ ಸಿಗುವುದಿಲ್ಲ. ಒಬ್ಬ ರೈತ ನಾಯಕ, ದಲಿತ ಲೇಖಕ ಪ್ರವಾಸ ಕೈಗೊಂಡಿದ್ದರೆ ಅಲ್ಲಿ ಭಿನ್ನ ಚಿತ್ರಣ ಇರುತ್ತಿತ್ತು. ಒಬ್ಬ ಇಂಜಿನಿಯರ್ ಪ್ರವಾಸ ಕೈಗೊಂಡಿದ್ದರೆ ಅಮೇರಿಕವನ್ನು ನೋಡುವ ಬಗೆ ಅಲ್ಲಿನ ತಂತ್ರಜ್ಞಾನದ ಬಗೆಗೆ ಹೆಚ್ಚಿನ ಮಾಹಿತಿ ದೊರಕುತ್ತಿತ್ತು. ಆದರೆ ಅಂತಹ ಚಿತ್ರಣ ಈ ಮೂರು ಪ್ರವಾಸ ಕಥನಗಳಲ್ಲಿ ನೀಡಲು ಸಾಧ್ಯವಾಗಿಲ್ಲ. ಆದರೆ ಮೂಲತಃ ಮಧ್ಯಮವರ್ಗದ ಲೇಖಕರಾಗಿರುವುದರಿಂದ ಇಲ್ಲಿನ ಚಿತ್ರಣದಲ್ಲಿ ಒಂದು ಬಗೆಯ ಏಕರೂಪತೆಯಿದೆ.

೩. ಈ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಹೆಚ್ಚಿನ ಸಾಧ್ಯತೆಗಳೂ ಇವೆ. ಅಮೇರಿಕಕ್ಕೆ ಕೇವಲ ಲೇಖಕರಷ್ಟೇ ಹೋಗಿಲ್ಲ. ರಾಜಕಾರಣಿಗಳು, ವ್ಯಾಪಾರಿಗಳು, ಉದ್ಯಮಿಗಳು, ವೈದ್ಯರು, ಎಡಪಂಥೀಯರು, ರೈತರು, ಇಂಜಿನೀಯರುಗಳು - ಹೀಗೆ ಅನೇಕ ವೃತ್ತಿವರ್ಗ ಜನ ಹೋಗಿ ಬಂದಿರುವುದರಿಂದ ಅವರು ಅಮೇರಿಕವನ್ನು ನೋಡುವ ದೃಷ್ಟಿಕೋನವೂ ಸಹಜವಾಗಿ ಭಿನ್ನವಾಗಿರುತ್ತದೆ. ಹಾಗಾಗಿ ಬೇರೆ ಬೇರೆ ವೃತ್ತಿವರ್ಗದವರು ರಚಿಸಿರುವ ಪ್ರವಾಸ ಕಥನಗಳನ್ನು ಅಧ್ಯಯನ ಮಾಡಿದಾಗ ಅಮೇರಿಕವನ್ನು ಸಮಗ್ರವಾಗಿ ತಿಳಿಯಲು ಸಾಧ್ಯವಾಗುತ್ತದೆ. ಪ್ರಸ್ತುತ ಅಧ್ಯಯನದ ಅನುಕೂಲತೆಗಾಗಿ ಮೂರು ಪ್ರವಾಸ ಕಥನಗಳನಷ್ಟೇ ಆಯ್ದುಕೊಂಡಿದ್ದು, ಭಿನ್ನ ಮನೋವೃತ್ತಿಯ ಜನರ ಪ್ರವಾಸ ಕಥನಗಳ ಅಧ್ಯಯನದಿಂದ ಅಧ್ಯಯನಕ್ಕೆ ಹೆಚ್ಚಿನ ಸಾಧ್ಯತೆ ಇದೆ.

೪. ಆಶಯ ದೃಷ್ಟಿಕೋನಗಳು ಈ ಅಧ್ಯಯನದಲ್ಲಿ ಯಾವ ರೂಪ ಪಡೆದುಕೊಂಡಿವೆ ಎಂಬುದನ್ನು ಸ್ಪಷ್ಟವಾಗಿ ಹೇಳಲು ಈ ಅಧ್ಯಯನದಲ್ಲಿ ಸಾಧ್ಯವಾಗಿಲ್ಲ. ಆದರೆ ಈ ಪ್ರವಾಸ ಕಥನಗಳಲ್ಲಿ ಅಭಿವ್ಯಕ್ತವಾಗಿರುವ ಭಾಷೆ ಶೈಲಿ ಯಾವ ರೂಪವನ್ನು ಪಡೆದಿವೆ ಎಂಬುದನ್ನು ಮುಂದಿನ ಅಧ್ಯಯನದಲ್ಲಿ ಮತ್ತಷ್ಟು ವಿವರವಾಗಿ ನೋಡಬಹುದಾಗಿದೆ.

೫. ಪ್ರವಾಸ ಕಥನಗಳು ಹೆಚ್ಚು ಹೆಚ್ಚು ಕಥೆ ಭಾಗವನ್ನು ಹೇಳುವಂತಹುಗಳು. ಈ ಅಧ್ಯಯನದ ವಿಶ್ಲೇಷಣೆಯಲ್ಲಿ ಕಥಾಸಾರವು ಒಳಗೆ ನುಗ್ಗದಂತೆ ನೋಡಿಕೊಳ್ಳುವುದೇ ಒಂದು ಸಮಸ್ಯೆಯಾಗಿ ಕಾಡಿತು. ಆದರೂ ಈ ಅಧ್ಯಯನದ ಪ್ರತಿಯೊಂದು ಅಧ್ಯಾಯದಲ್ಲಿ ಕಥೆಗಳನ್ನು ಹೇಳದೇ ಮುಖ್ಯವೆನಿಸಿದ ಕೆಲವು ಭಾಗಗಳನ್ನು ಆಯ್ದುಕೊಂಡು ಅದರ ವಿಶ್ಲೇಷಣೆಗೆ ಹೆಚ್ಚು ಒತ್ತು ನೀಡಲು ಪ್ರಯತ್ನಿಸಲಾಗಿದೆ. ಮುಖ್ಯ ಸನ್ನಿವೇಶಗಳ ದಾಖಲಿಸಿ ಅದರ ವಿಶ್ಲೇಷಣೆ ಮಾಡುವುದರ ಮೂಲಕ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲಾಗಿದೆ.

* * *

ಅನುಬಂಧ

## ೧. ಕನ್ನಡದಲ್ಲಿ ಅಮೆರಿಕ ಪ್ರವಾಸ ಕಥನಗಳ ಸಮಗ್ರ ಪಟ್ಟಿ


೧. ಅನುಪಮ ನಿರಂಜನ, ೧೯೮೪, ಅಂಗೈಯಲ್ಲಿ ಯುರೋ ಅಮೆರಿಕ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೨. ಅಜ್ಜಂಪುರ ಕೃಷ್ಣಸ್ವಾಮಿ, ೧೯೯೫, ಆಗಮಿಕರ ನಾಡು, ಸ್ವರ್ಣಾಂಬ ಪಬ್ಲಿಕೇಷನ್ಸ್, ಬೆಂಗಳೂರು.

೩. ಆರ್ಯಾಂಬ ಪಟ್ಟಾಭಿ, ೧೯೯೭, ವಿದೇಶ ಪ್ರವಾಸ, ತ್ರಿವೇಣಿ ಪಬ್ಲಿಕೇಷನ್ಸ್, ಮೈಸೂರು.

೪. ಕುಲಕರ್ಣಿ ಜೀವಿ, ೨೦೦೨, ಜೀವಿ ಕಂಡ ಅಮೆರಿಕ, ಹರ್ಷವರ್ಧನ ಪ್ರಕಾಶನ, ಮುಂಬಯಿ.

೫. ಕುಲಶೇಖರಿ, ೧೯೯೭, ಬೊಗಸೆ ಬುತ್ತಿ, ಚಿನ್ಮಯ ಪ್ರಕಾಶನ, ಬೆಂಗಳೂರು.

೬. ಕೃಷ್ಣಮೂರ್ತಿ ಬಕ್ಕಕುಂದಿ, ೨೦೦೫, ನನ್ನ ವಿದೇಶ ಪ್ರವಾಸ, ಮಹದಾನಂದ ಪ್ರಕಾಶನ, ಬೆಂಗಳೂರು.

೭. ಕೃಷ್ಣಮೂರ್ತಿರಾವ್ ಕೆ.ಎನ್., ೧೯೮೮, ಅಮೆರಿಕ ಪ್ರವಾಸದ ಅನುಭವಗಳು, ಸುವಿದ್ಯಾ ಪ್ರಕಾಶನ, ಬೆಂಗಳೂರು.

೮. ಕೃಷ್ಣಾನಂದ ಕಾಮತ್, ೧೯೭೬, ನಾನು ಅಮೆರಿಕೆಗೆ ಹೋಗಿದ್ದೆ, ಮನೋಹರ ಗ್ರಂಥಮಾಲೆ, ಧಾರವಾಡ.

೯. ಗಣೇಶ ಮಲ್ಯ ಕೆ., ೧೯೭೨, ಅಮೆರಿಕದಲ್ಲಿ ಅರವತ್ತು ದಿನಗಳು, ಯುಗಪುರುಷ ಪ್ರಕಟನಾಲಯ, ಕಿನ್ನಿಗೊಳಿ, ದ.ಕ.

೧೦. ಗುರುಮೂರ್ತಿ ಕೆ.ಜಿ., ೨೦೦೦, ಅಮೆರಿಕೆಯಲ್ಲಿ ಪ್ರವಾಸ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೧೧. ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೭೬, ಅಮೆರಿಕಾದಲ್ಲಿ ಗೊರೂರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೨. ಗೋಪಾಲ ಜಿ., ೧೯೮೨, ಮೈಸೂರಿನಿಂದ ಮೆಕ್ಸಿಕೋಗೆ, ಗಿರಿ ಪ್ರಕಾಶನ, ಮೈಸೂರು.

೧೩. ಗೌತಮ ಎಸ್.ಆರ್., ೧೯೮೧, ನಯಾಗರಕ್ಕೆ ಐನೂರು ಮೈಲಿ, ಅನುಪಮ ಪ್ರಕಾಶನ, ಬೆಂಗಳೂರು.

೧೪. ಚಂದ್ರಭಾಗಾದೇವಿ, ೧೯೭೧, ಗೆಜ್ಜೆಯ ಹೆಜ್ಜೆ ನುಡಿ, ಲೋಕ ಶಿಕ್ಷಣ ಮಾಲೆ, ಬೆಂಗಳೂರು.

೧೫. ಚಂದ್ರವದನರಾವ್ ಎಚ್.ಆರ್., ೨೦೦೧, ವಿದೇಶ ಪ್ರವಾಸ, ಎಚ್.ಆರ್. ಚಂದ್ರವದನರಾವ್, ಬೆಂಗಳೂರು.

೧೬. ಚಂದ್ರಶೇಖರ ಆಲೂರು, ೨೦೦೨, ಅಮೆರಿಕಾದಲ್ಲಿ ಆಲೂರು, ಭಾವನಾ ಪ್ರಕಾಶನ, ಬೆಂಗಳೂರು.

೧೭. ಜಗದಂಬಾ ಮಲ್ಲೇದೇವರು, ೨೦೦೨, **ಪಯಣಿಗಳಾಗಿ ಪಶ್ಚಿಮದೆಡೆಗೆ**, ಸಂವಹನ, ಮೈಸೂರು.

೧೮. ಜಲಜಾ ಗಂಗೂರ, ೨೦೦೧, **ಅವನಿಯ ಅಪ್ಸರೆ ಅಮೆರಿಕಾ**, ಜಗದಾನಿ ಪ್ರಕಾಶನ, ಹೊಸಪೇಟೆ.

೧೯. ಜಯಕಾಲಬಾಗಲ್, ೧೯೯೬, **ಅಮೆರಿಕದಲ್ಲಿ ಅವರತ್ತೇಳರ ಹುಟ್ಟುಹಬ್ಬ**, ಕ್ರಿಯೆಟಿವ್ ಕಂಬೈನ್ಸ್, ಮೈಸೂರು.

೨೦. ಜೋಷಿ ಬಿ.ಆರ್., ೨೦೦೪, **ಕೈಗೂಡಿದ ಕನಸು**, ಕರ್ಕೇರಾ ಪ್ರಕಾಶನ, ಮುಂಬಯಿ.

೨೧. ಧಾರವಾಡಕರ ರಾ.ಯ., ೧೯೮೫, **ನಾನು ಕಂಡ ಅಮೆರಿಕ**, ಪವನ ಪ್ರಕಾಶನ, ಧಾರವಾಡ.

೨೨. ಧಾರಿಣಿ, ೧೯೯೯, **ಭಾವ-ಸೇತು ಜ್ವಾಲಾ**, ಮಾಲಾ ಪ್ರಕಾಶನ, ಬೆಂಗಳೂರು.

೨೩. ದೇಜಗೌ., ೧೯೯೫, **ವಿಸ್ಮಯಗಳ ನಾಡಿನಲ್ಲಿ**, ಸಂವಹನ, ಮೈಸೂರು.

೨೪. ನಾಗ ಐತಾಳ, ೨೦೦೨, **ಅಮೆರಿಕನ್ನಡಿಯೊಬ್ಬನ ದಿನಚರಿಯಿಂದ**, ವಸಂತ ಪ್ರಕಾಶನ, ಬೆಂಗಳೂರು.

೨೫. ನಾಗತಿಹಳ್ಳಿ ಚಂದ್ರಶೇಖರ, ೧೯೯೭, **ಅಮೆರಿಕಾ! ಅಮೆರಿಕಾ!**, ಅಭಿವ್ಯಕ್ತಿ ಸಾಂಸ್ಕೃತಿಕ ವೇದಿಕೆ, ಬೆಂಗಳೂರು.

೨೬. ನಾಗಪ್ಪ ಟಿ.ಆರ್., ೧೯೯೨, **ದೇಶ ನೋಡು ಕೋಶ ಓದು**, ಟಿ.ಆರ್. ನಾಗಪ್ಪ ಪ್ರಕಾಶನ, ಮೈಸೂರು.

೨೭. ನಾಗರಾಜರಾವ್ ಮ., ೧೯೭೮, **ನಾರಿ ನಿನಗೆ ನಮೋ ನಮೋ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೮. ನಾಡಿಗ ಕೃಷ್ಣಮೂರ್ತಿ, ೧೯೭೩, **ಸಾಗರದಾಚೆ**, ಗೀತಾ ಸಾಹಿತ್ಯ ಮಂದಿರ, ಬೆಂಗಳೂರು.

೨೯. ನೀಳಾದೇವಿ, ೧೯೮೫, **ನಾ ಕಂಡ ಆ ಖಂಡ**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೩೦. ನಂಜೇಗೌಡ ಎಚ್.ಬಿ., ಸೀತಮ್ಮ ನಂಜೆಗೌಡ, ೧೯೮೧, **ನಾವು ಕಂಡ ಅಮೆರಿಕಾ**, ಶಾರಂದಾಂಬಾ ಪ್ರಕಾಶನ, ಮೂಡಿಗೆರೆ.

೩೧. ನಂಜುಂಡೇಗೌಡ ಜಿ.ಆರ್., ೧೯೮೬, **ಕೆರೇಬಿಯನ್ ದ್ವೀಪಗಳಲ್ಲಿ**, ಅರವಿಂದ ಪ್ರಕಾಶನ, ಮೈಸೂರು.

೩೨. ನಂಜುಂಡಶಾಸ್ತ್ರಿ ಎನ್., ೧೯೮೭, **ಅಮೆರಿಕ ಭಾರತೀಯನ ದೃಷ್ಟಿಯಲ್ಲಿ**, ಬೆಂಗಳೂರು.

೩೩. ಪರಮೇಶ್ವರಿ ಲೋಕೇಶ್ವರ್, ೨೦೦೩, **ಅಮೆರಿಕಾದಲ್ಲಿ ಅರವತ್ತು ದಿನಗಳು**, ಪುಸ್ತಕ ನಿಧಿ ಗಾವಳಿ, ಕುಂದಾಪುರ.

೩೪. ಪದ್ಮಾ ಉಮಾಪತಿ, ೧೯೭೩, **ನಾವು ಕಂಡ ಅಮೆರಿಕಾ**, ಸುದರ್ಶನ ಪ್ರಕಾಶನ, ತಿಪಟೂರು.

೩೫. ಪದ್ಮಾ ಶೆಣೈ, ೧೯೯೩, **ಅಮೆರಿಕಾ ವಾಸ ಪ್ರವಾಸ**, ಮೋಡರ್ನ್ ಪ್ರಿಂಟಿಂಗ್, ಮಂಗಳೂರು.

೩೬. ಪುಟ್ಟಮಾದಪ್ಪ ವಿ., ೧೯೮೩, **ನೆಮ್ಮಗೆಯ ನಾಡು**, ವಾಗ್ದೇವಿ ಪುಸ್ತಕಗಳು, ಮೈಸೂರು.

೩೭. ಪುಟ್ಟಮಾದಪ್ಪ ವಿ., ೧೯೮೫, **ಮಂಜಿನ ಮಡಿಲಲ್ಲಿ**, ವಾಗ್ದೇವಿ ಪುಸ್ತಕಗಳು, ಮೈಸೂರು.

೩೮. ಪೆಂಡಕೂರು ಗುರುಮೂರ್ತಿ, ೧೯೭೩, ಬಹುರೂಪಿ ವಸುಂಧರಾ, ಯುವಕರ ಸಂಘ, ಹಗರಿಬೊಮ್ಮನಹಳ್ಳಿ.

೩೯. ಪೆಂಡಕೂರು ಗುರುಮೂರ್ತಿ, ೨೦೦೪, ಅವಕಾಶಗಳ ಅಮರಾವತಿ ಅಮೆರಿಕಾ, ಯುವಕರ ಸಂಘ, ಹಗರಿಬೊಮ್ಮನಹಳ್ಳಿ.

೪೦. ಬಗರಿ ಎನ್.ಡಿ., ೧೯೭೬, ವಿದೇಶ ಪ್ರವಾಸದ ಅನುಭವಗಳು, ಕಲಾ ಪ್ರಕಾಶನ, ಬೆಂಗಳೂರು.

೪೧. ಭದ್ರಯ್ಯ ಎನ್., ೧೯೭೬, ಪ್ರಪಂಚ ಪರ್ಯಟನ, ಸಾಧನ ಸಾಹಿತ್ಯ ಮಂದಿರ, ಮೈಸೂರು.

೪೨. ಮಣಿಕ್ಕಾರ ಗೋಪಾಲಕೃಷ್ಣ ಶ್ಯಾನಭಾಗ, ೧೯೯೯, ಅಮೆರಿಕಾ ಅನುಭವಗಳು, ಕನ್ನಡ ಪ್ರಪಂಚ ಪ್ರಕಾಶನ, ಪುತ್ತರೂ (ದ.ಕ).

೪೩. ಮಾಳವಾಡ ಸ.ಸ., ೧೯೭೯, ಸಂಚಾರ ಸಂಗಮ, ಜಯ ಪ್ರಕಾಶನ, ಧಾರವಾಡ.

೪೪. ಮೂರ್ತಿರಾವ್ ಎನ್.ಎನ್., ೧೯೭೯, ಅಪರವಯಸ್ಕನ ಅಮೆರಿಕಯಾತ್ರೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೪೫. ರಂಗನಾಥ ಹೆಚ್.ಕೆ., ೧೯೮೩, ಪರದೇಶಿಯಾದಾಗ, ಐ.ಬಿ.ಹೆಚ್., ಪ್ರಕಾಶನ, ಬೆಂಗಳೂರು.

೪೬. ರಂಜನಾಭಟ್ಟ, ೧೯೮೩, ಕುಬೇರ ರಾಜ್ಯದ ಚಿತ್ರ ವಿಚಿತ್ರ, ಗೀತಾ ಬುಕ್ ಹೌಸ್, ಮೈಸೂರು.

೪೭. ರಜತಾದ್ರಿ, ೧೯೬೮, ಪಶ್ಚಿಮದ ಹೊಂಬೆಳಕು, ಸ್ವರಕಿರಣ ಪ್ರಕಾಶನ, ಮೈಸೂರು.

೪೮. ರಾಮನ್ ಬಿ.ವಿ., ೧೯೭೩, ಅಮೆರಿಕಾದಲ್ಲಿ ಓರ್ವಹಿಂದೂ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೪೯. ರಾಮಣ್ಣ ಕೆ., ೨೦೦೨, ಜಗವಸುತ್ತಿನಲಿ-ಜನರ ನೋಡಿ ಕಲಿ, ಆಶಾ ಪ್ರಕಾಶನ, ಮೈಸೂರು.

೫೦. ರಾಮಚಂದ್ರನ್ ಕೆ.ಆರ್., ೧೯೯೪, ಅಮೆರಿಕಾದಲ್ಲೊಬ್ಬ ಗಾಂಪ, ಗೀತಾ ಬುಕ್ ಹೌಸ್, ಮೈಸೂರು.

೫೧. ರಾಮರಾವ್ ಟಿ.ಕೆ., ೧೯೭೧, ಗೋಳದ ಮೇಲೊಂದು ಸುತ್ತು, ಹಂಸಧ್ವನಿ ಪ್ರಕಾಶನ, ಬೆಂಗಳೂರು.

೫೨. ರಾಜಲಕ್ಷ್ಮೀ ಗೋಪಾಲ, ೧೯೯೮, ಅಮರಲೋಕದಲ್ಲಿ ಅಧ್ಯಾಪಕಿ, ನಾದ ಪ್ರಕಾಶನ, ಬೆಂಗಳೂರು.

೫೩. ಲಲಿತಾಶಾಸ್ತ್ರಿ, ೨೦೦೦, ಉತ್ತರ ಅಮೆರಿಕಾದಲ್ಲಿ ಚಾತುರ್ಮಾಸ, ಮಧು ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು.

೫೪. ಲಲಿತಾ ಸುಬ್ಬರಾವ್, ೧೯೭೧, ನಾನು ಮತ್ತು ಅಮೆರಿಕಾ, ವಾಗ್ದೇವಿ ಪ್ರಕಾಶನ, ಬೆಂಗಳೂರು.

೫೫. ವರದರಾಜನ್, ೧೯೯೮, ಕಣ್ಣಂಚಿನಲ್ಲಿ ಪೂರ್ವ ಪಶ್ಚಿಮ, ದಿವ್ಯಚಂದ್ರ ಪ್ರಕಾಶನ, ಬೆಂಗಳೂರು.

೫೬. ವಸಂತರಾಜ ಎನ್.ಕೆ., ೨೦೦೨, ಅಮೆರಿಕಾದೊಳಗೊಂದು ಇಣುಕು, ಅಧ್ಯಯನ ಪ್ರಕಾಶನ, ಶಿರಸಿ.

೫೭. ವಿರೂಪಾಕ್ಷಪ್ಪ ಬಿ., ೧೯೯೬, ನಾ ಕಂಡ ಅಮೆರಿಕ, ಬಸವ ಭವನ, ಬೆಂಗಳೂರು.

೫೮. ವಿಶ್ವಾಸ, ೨೦೦೦, ಪಿಡಿದು ಸಂಸ್ಕೃತ ಸೂತ್ರವ, ಲಲಿತಾ ಪ್ರಕಾಶನ, ಬೆಂಗಳೂರು.

೫೯. ವೆಂಕಟರಾಮ ಎನ್., ೧೯೮೧, ಪ್ರದಕ್ಷಿಣೆ, ಅಕ್ಷರ ಪ್ರಕಾಶನ, ಸಾಗರ.

೬೦. ವೆಂಕಟಸ್ವಾಮಿ ನಂದಿ ಎಸ್., ೧೯೮೪, ಪಾಶ್ಚಾತ್ಯ ಪ್ರವಾಸ ನೆನಪುಗಳು, ಬಿ.ಆರ್., ಪ್ರಕಾಶನ, ಬೆಂಗಳೂರು.

೬೧. ವೆಂಕಟಸ್ವಾಮಿ, ೨೦೦೪, ಅಮೆರಿಕಾದಲ್ಲಿ ನನ್ನ ಅನುಭವಗಳು, ಅಳಿಲು ಸೇವಾ ಸಂಸ್ಥೆ, ಬೆಂಗಳೂರು.

೬೨. ವೆಂಕಟೇಶಮೂರ್ತಿ ಎಚ್.ಎಸ್., ೧೯೯೭, ಅಮೆರಿಕದಲ್ಲಿ ಬಿಲ್ಲು ಹಬ್ಬ, ಆನಂದ ಕಂದ ಗ್ರಂಥಮಾಲೆ, ಮುಲ್ಲಾಡಿಹಳ್ಳಿ.

೬೩. ವ್ಯಾಸರಾಯ ಬಲ್ಲಾಳ, ೧೯೮೭, ನಾನೊಬ್ಬ ಭಾರತೀಯ ಪ್ರವಾಸಿ, ಗೀತಾ ಬುಕ್ ಹೌಸ್, ಮೈಸೂರು.

೬೪. ಶಶಿಧರ ವಿಶ್ವಾಮಿತ್ರ, ೨೦೦೩, ಪರಕೀಯ, ಅಳಿಲು ಸೇವಾಸಂಸ್ಥೆ, ಬೆಂಗಳೂರು.

೬೫. ಶಿವರಾಮ ಕಾರಂತ ಕೆ., ೧೯೭೩, ಪಾತಾಳಕ್ಕೆ ಪಯಣ, ಇಂಡಿಯಾ ಬುಕ್ ಹೌಸ್, ಬೆಂಗಳೂರು.

೬೬. ಶಿವರುದ್ರಪ್ಪ ಜಿ.ಎಸ್., ೧೯೮೮, ಅಮೆರಿಕದಲ್ಲಿ ಕನ್ನಡಿಗ, ಶಾರದ ಪ್ರಕಾಶನ, ಬೆಂಗಳೂರು.

೬೭. ಶೀನ್ರ್ಾಳಿ ಚಂದ್ರಶೇಖರ, ೧೯೭೯, ನನ್ನ ಕನಸು ನನಸಾದಾಗ, ತಮಸೋಮಾ ಪ್ರಕಾಶನ, ಶಿವಮೊಗ್ಗ.

೬೮. ಶ್ರೀಧರ ಬಿ., ೧೯೮೦, ಸ್ವಪ್ನಲೋಕ, ಶ್ರೀ ಶ್ರೀ ಶಿಕ್ಷಣ ಸಂಸ್ಥೆ, ಬೆಂಗಳೂರು.

೬೯. ಶ್ರೀನಿವಾಸಯ್ಯ ಹೊ., ೧೯೮೯, ಜಯಶ್ರೀ ಕಂಡ ಅಮೆರಿಕಾ, ಸುವಿದ್ಯಾ ಪ್ರಕಾಶನ, ಬೆಂಗಳೂರು.

೭೦. ಶ್ರೀಮಿತ್ತೂರು, ೧೯೯೪, ಅಮೆರಿಕಾ ನಾನು ಕಂಡಂತೆ ಜನಜೀವನ, ಸಾಹಿತ್ಯ ಸದನ, ಬೆಂಗಳೂರು.

೭೧. ಸಣ್ಣಯ್ಯ ಬಿ.ಎಸ್., ೨೦೦೧, ನಾನೂ ಹೋಗಿದ್ದೆ ಅಮೆರಿಕೆಗೆ, ಸಂವಹನ, ಮೈಸೂರು.

೭೨. ಸರಸ್ವತಿ ನಾಗರಾಜ ಎನ್.ಎಸ್., ನಾವು ನೋಡಿದ ಪಶ್ಚಿಮ ದೇಶಗಳ ಒಂದು ಇಣುಕು ನೋಟ, ಸಮುದಾಯ ಅಧ್ಯಯನ ಕೇಂದ್ರ, ಮೈಸೂರು.

೭೩. ಸ್ವಾಮಿ ಬಿ.ಎಸ್., ೧೯೬೨, ಅಮೆರಿಕದಲ್ಲಿ ನಾನು, ಕಾವ್ಯಾಲಯ, ಮೈಸೂರು.

೭೪. ಸೀತಾರಾಮಯ್ಯ ಕೆ.ಎಂ., ೨೦೦೧, ಅಪೂರ್ವ, ಸುಜಾತ ಸಾಹಿತ್ಯ, ಬೆಂಗಳೂರು.

೭೫. ಸೀಯಾರ್ಕ್, ೨೦೦೪, ಇದು ಅಮೆರಿಕ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೭೬. ಸುಧಾಮೂರ್ತಿ, ೧೯೮೧, ಅಂಟ್ಲಾಟಿಕ್‌ದಾಚೆಗೆ, ಮನೋಹರ ಗ್ರಂಥಮಾಲೆ, ಧಾರವಾಡ.

೭೭. ಸುಬ್ಬರಾಯಾಚಾರ್ ಉ.ಕಾ., ೧೯೮೫, ಅಮೆರಿಕಾದ ಅನುಭವ, ಜಿ. ಸಾವಿತ್ರಿ, ಮೈಸೂರು.

೭೮. ಸುಶೀಲಾ ಕೊಪ್ಪರ್, ೧೯೯೦, ಪಡುವಣದ ಪತ್ರಮಾಲೆ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ.

೭೯. ಸಾರಾ ಅಬೂಬಕ್ಕರ್, ೨೦೦೧, ಐಷಾರಾಮದ ಆಳದಲ್ಲಿ, ಚಂದ್ರಗಿರಿ ಪ್ರಕಾಶನ, ಮಂಗಳೂರು.

೮೦. ಸ್ವಾಮಿ ಬಿ.ಎಸ್., ೨೦೦೦, ಅಮರ ನೆನಪು ಅಮೆರಿಕ, ನವೀನ ಪ್ರಕಾಶನ, ಬೆಂಗಳೂರು.

೮೧. ಹೆಗಡೆ ಪಿ.ಎ., ೨೦೦೨, ಆಲ್ಮನೆಯಿಂದ ಆ್ಯನ್ ರಬ್ಬರ್‌ಗೆ, ಅನನ್ಯ ಪ್ರಕಾಶನ, ಧಾರವಾಡ.

## ೨. ಗ್ರಂಥಸೂಚಿ


### ಅ. ಬಳಕೆಯಾದ ಮೂಲ ಕೃತಿಗಳು

೧. ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೯೪, **ಅಮೆರಿಕದಲ್ಲಿ ಗೊರೂರು,** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೨. ಪ್ರಭುಶಂಕರ, ೧೯೮೩, **ಅಮೆರಿಕದಲ್ಲಿ ನಾನು, ಶಾಂತಿ,** ನಿವೇದಿತಾ ಪ್ರಕಾಶನ, ಮೈಸೂರು, ೧೯೮೧.

೩. ಮೂರ್ತಿರಾವ್ ಎನ್.ಎಸ್., ೧೯೭೯, **ಅಪರವಯಸ್ಕನ ಅಮೆರಿಕ ಯಾತ್ರೆ,** ಡಿ.ವಿ.ಕೆ. ಮೂರ್ತಿ, ಮೈಸೂರು, ೨೦೦೪.

೪. ವಸಂತರಾಜ ಎನ್.ಕೆ., ೨೦೦೨, **ಅಮೆರಿಕಾದೊಳಗೊಂದು ಇಣುಕು,** ಅಧ್ಯಯನ ಪ್ರಕಾಶನ, ಶಿರಸಿ, (ಉತ್ತರ ಕನ್ನಡ).

೫. ಶಿವರುದ್ರಪ್ಪ ಜಿ.ಎಸ್., ೧೯೯೫, **ಅಮೆರಿಕದಲ್ಲಿ ಕನ್ನಡಿಗ,** ಕಾಮಧೇನು ಪ್ರಕಾಶನ, ಬೆಂಗಳೂರು.

೬. ಸಾರಾ ಅಬೂಬಕ್ಕರ್, ೨೦೦೨, **ಐಷಾರಾಮದ ಆಳದಲ್ಲಿ,** ಚಂದ್ರಗಿರಿ ಪ್ರಕಾಶನ, ಮಂಗಳೂರು.

೭. ಸೀಯಾರ್ಕೆ, ೨೦೦೪, **ಇದು ಅಮೆರಿಕ,** ನವಕರ್ನಾಟಕ, ಪ್ರಕಾಶನ, ಬೆಂಗಳೂರು.

೮. ಸ್ವಾಮಿ ಬಿ.ಜಿ.ಎಲ್., ೧೯೬೨, **ಅಮೆರಿಕದಲ್ಲಿ ನಾನು,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦.

### ಆ. ಪರಾಮರ್ಶನ ಗ್ರಂಥಗಳು

೧. ಗಿರೀಶ್ ಕೆ., ೨೦೦೨, **ಅಮೆರಿಕ-ಅಂತರಂಗ,** ನಮ್ಮನಾಡು ಪ್ರಕಾಶನ, ಶಿವಮೊಗ್ಗ.

೨. ತಾರಾನಾಥ ಎನ್.ಎಸ್., ೨೦೦೪, **ಸಹಚರ,** ಭಾರತೀ ಪ್ರಕಾಶನ, ಮೈಸೂರು.

೩. ತಾರಾನಾಥ ಎನ್.ಎಸ್., ೧೯೯೦, **ಪ್ರವಾಸ ಸಾಹಿತ್ಯ,** ಶಕ್ತಿ ಪ್ರಕಾಶನ, ಗೋಕುಲಂ, ಮೈಸೂರು.

೪. ಪರಮಶಿವಮೂರ್ತಿ ಜಿ.ಎಸ್., ೧೯೭೯, **ಕನ್ನಡದಲ್ಲಿ ಪ್ರವಾಸ ಸಾಹಿತ್ಯ,** ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೫. ಪಾಲಾಕ್ಷ, ೧೯೯೭, **ಆಧುನಿಕ ಯುರೋಪ್ ೧೭೮೯-೧೯೯೭,** ಶಶಿಪ್ರಕಾಶನ, ತಿಪಟೂರು.

೬. ಬರಗೂರು ರಾಮಚಂದ್ರ (ಸಂ.), ೧೯೯೨, **ಕನ್ನಡ ಸಾಹಿತ್ಯ ಸಮೀಕ್ಷೆ,** ೧೯೯೧, ವಿದ್ಯಾಶಂಕರ್ ಎಸ್., ಪ್ರವಾಸ ಮತ್ತು ಮಕ್ಕಳ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೭. ಮರುಳಯ್ಯ ಸಾಶಿ., ೧೯೯೧, ಅವಸ್ಥಾ ಪ್ರವಾಸ ಸಾಹಿತ್ಯ, ರಾಗಿಣಿ ಪ್ರಕಾಶನ, ಬೆಂಗಳೂರು.

೮. ಮಲ್ಲೇಪುರಂ ಜಿ. ವೆಂಕಟೇಶ (ಸಂ.), ೧೯೯೨, ಪ್ರವಾಸ ಸಾಹಿತ್ಯ : ಒಂದು ಅಧ್ಯಯನ, ಹೊನ್ನ ಪ್ರಕಾಶನ, ಬೆಂಗಳೂರು.

೯. ರಾಧಾಕೃಷ್ಣ ಬಿ.ಪಿ., ೧೯೮೫, ಬಿ.ಜಿ.ಎಲ್. ಸ್ವಾಮಿ (ಜೀವನ ಮತ್ತು ಸಾಧನೆ), ಕನ್ನಡ ವಿಜ್ಞಾನ ಪರಿಷತ್ತು, ಬೆಂಗಳೂರು.

೧೦. ವಿದ್ಯಾಶಂಕರ, ೧೯೯೧, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಸ್ನೇಹ ಪ್ರಕಾಶನ, ಬೆಂಗಳೂರು.

**೩. ಲೇಖನಗಳು**

೧. ಚಂದ್ರಶೇಖರ ನಂಗಲಿ, ೨೦೦೨, 'ಎ.ಎನ್. ಮೂರ್ತಿರಾಯರ ಅನುಭವ ಕಥನಗಳು', ತಿಟ್ಹತ್ತಿ ತಿರುಗಿ, ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು.

೨. ದಿನೇಶ್ ಹಾಸನ, ಜೂನ್ ೨೦೦೪, 'ಅಮೆರಿಕದಲ್ಲಿ ಶೈಕ್ಷಣಿಕ ಸ್ವಾತಂತ್ರ್ಯದ ವಿರುದ್ಧ ಸಮರ', ಹೊಸತು, ನವಕರ್ನಾಟಕ, ಪಬ್ಲಿಕೇಶನ್, ಬೆಂಗಳೂರು.

೩. ಬಾಗಲೋಡಿ ದೇವರಾಯ, ೧೯೪೮, ಅಮೆರಿಕದಲ್ಲಿ ನೀಗ್ರೋಜನಕ ದುಃಖ ಪರಂಪರೆ, ಪ್ರಬುದ್ಧ ಕರ್ನಾಟಕ ಸಂಪುಟ ೩೦, ಸಂಚಿಕೆ ೧, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೪. ಮುರಳೀಧರ, ಮೇ ೨೦೦೫, 'ಅಮೆರಿಕದ ಬಂಡವಾಳಶಾಹಿ ಮಡಿಲಿನಿಂದ ಸಿಡಿದ ಸಂಘರ್ಷದ ಕಿಡಿ', ಹೊಸತು, ನವಕರ್ನಾಟಕ ಪಬ್ಲಿಕೇಶನ್, ಬೆಂಗಳೂರು.

೫. ಶೇಷಗಿರಿರಾವ್ ಎಲ್.ಎಸ್. (ಸಂ.), ೧೯೯೨, ವಿರೇಂದ್ರಸಿಂಪಿ, 'ಪ್ರಬಂಧ ಪ್ರವಾಸ ಹಾಗೂ ಮಕ್ಕಳ ಸಾಹಿತ್ಯ', ಕನ್ನಡ ಸಾಹಿತ್ಯ ಸಮೀಕ್ಷೆ, ೧೯೯೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬. ಸೀಯಾರ್ಕೆ, ಜೂನ್ ೨೦೦೭, 'ಬಂದೂಕು ಸಂಸ್ಕೃತಿ ತಂದ ದುರಂತ', ಹೊಸತು, ನವಕರ್ನಾಟಕ ಪಬ್ಲಿಕೇಶನ್, ಬೆಂಗಳೂರು.

೭. ಹುಯಿಲಗೋಳ ವರದರಾಜ, ೧೯೬೯, 'ಪ್ರವಾಸ ಸಾಹಿತ್ಯ', ಪ್ರಬುದ್ಧ ಕರ್ನಾಟಕ, ಚಿನ್ನದ ಸಂಚಿಕೆ, ಸಾಹಿತ್ಯ ಸಂಪುಟ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

* * *